ಎಂ. ಫಿಲ್. ಪದವಿಯ ಸಂಪ್ರಬಂಧ

# ಯು.ಆರ್.ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ

ಸಂಶೋಧನ ವಿದ್ಯಾರ್ಥಿ
ಟಿ. ಪ್ರತಿಮಾ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬೆಂಗಳೂರು.

ಮಾರ್ಗದರ್ಶಕರು
ಪ್ರೊ. ಹೆಚ್.ಎಸ್. ಹರಿಶಂಕರ್
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬೆಂಗಳೂರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.), ಬೆಂಗಳೂರು.
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ
೨೦೦೩

ಎಂ. ಫಿಲ್. ಪದವಿಯ ಸಂಪ್ರಬಂಧ

# ಯು.ಆರ್.ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ

ಸಂಶೋಧನ ವಿದ್ಯಾರ್ಥಿ
ಟಿ. ಪ್ರತಿಮಾ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬೆಂಗಳೂರು.

ಮಾರ್ಗದರ್ಶಕರು
ಪ್ರೊ. ಹೆಚ್.ಎಸ್. ಹರಿಶಂಕರ್
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬೆಂಗಳೂರು.



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.), ಬೆಂಗಳೂರು.
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ
೨೦೦೭

# ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೦೭ನೇ ಸಾಲಿನ ಎಂ. ಫಿಲ್. ಪದವಿಗಾಗಿ **"ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ"** ಎಂಬ ಸಂಪ್ರಬಂಧವನ್ನು **ಪ್ರೊ|| ಹೆಚ್. ಎಸ್. ಹರಿಶಂಕರ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೦೪-೦೮-೨೦೦೭

ಸ್ಥಳ : ಬೆಂಗಳೂರು

ಟಿ. [signature]

(ಟಿ. ಪ್ರತಿಮಾ)

# ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೦೭ನೇ ಸಾಲಿನ ಎಂ. ಫಿಲ್. ಪದವಿಗಾಗಿ "ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ" ಎಂಬ ಸಂಪ್ರಬಂಧವನ್ನು ನನ್ನ ಸಂಶೋಧನಾ ವಿದ್ಯಾರ್ಥಿನಿ ಶ್ರೀಮತಿ ಟಿ. ಪ್ರತಿಮಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿನಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೦೪-೦೮-೨೦೦೭
ಸ್ಥಳ : ಮೈಸೂರು.

ಎಚ್.ಎಸ್. ಹರಿಶಂಕರ್
(ಪ್ರೊ|| ಹೆಚ್. ಎಸ್. ಹರಿಶಂಕರ್)

## ಪರಿವಿಡಿ

# ಯು.ಆರ್.ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ

## ಅಧ್ಯಾಯ- ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಯು. ಆರ್. ಅನಂತಮೂರ್ತಿಯವರ ಐದು ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಬಂಡಾಯದ ನೆಲೆಗಳನ್ನು ಗುರುತಿಸುವ ಪ್ರಯತ್ನವಾದ ಈ ಅಧ್ಯಯನದಲ್ಲಿ ಅದಕ್ಕೂ ಮೊದಲು 'ಬಂಡಾಯ' ಎಂಬ ಜನಪರ ವಾದವು ನಮ್ಮ ಸಾಹಿತ್ಯದಲ್ಲಿ ಹೇಗೆ ಬೆಳೆದುಬಂದಿದೆ ಎಂಬುದನ್ನು ಅಧ್ಯಯನದ ವ್ಯಾಪ್ತಿಯಲ್ಲಿ ತಂದುಕೊಳ್ಳುವುದು ಮುಖ್ಯವಾಗುತ್ತದೆ. ವರ್ಣ, ಧರ್ಮ, ವರ್ಗಗಳಿಂದ ತುಂಬಿದ ಅಥವಾ ಛಿದ್ರವಾದ ಭಾರತೀಯ ಸಮಾಜದಲ್ಲಿ ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ ಹಿಂದುಳಿದ ಗುಂಪುಗಳು ಮುಂದುವರಿದ ಗುಂಪುಗಳಿಂದ ದಬ್ಬಾಳಿಕೆಗೆ ಒಳಗಾಗಿದೆ. ಇವರಲ್ಲಿ ಸಾಮರ್ಥ್ಯ ಪ್ರತಿಭೆಗಳಿದ್ದಾಗಲೂ ಅದನ್ನು ಸಮಾಜದ ಒಳಿತಿಗಾಗಿ ಬಳಸಿಕೊಳ್ಳುವ ಪ್ರಯತ್ನವನ್ನು ಸಮಾಜ ಕೈಗೊಳ್ಳುವುದಿಲ್ಲ.

ಇಂತಹ ಸಂದರ್ಭದಲ್ಲಿ ದಬ್ಬಾಳಿಕೆಯ ವಿರೋಧಿಯಾಗಿ ಈ ದುರ್ಬಲ ಗುಂಪುಗಳು ಹೋರಾಟವನ್ನು ನಡೆಸಿದವು. ಅದೇ ಸಂದರ್ಭದಲ್ಲಿ ಕಾನೂನಿನ ನಿಯಮಗಳು ಹಾಗೂ ಮಾನವೀಯ ಪ್ರಜ್ಞೆಯು ಈ ಹೋರಾಟಕ್ಕೆ ಬೆಂಬಲವನ್ನು ನೀಡಿದವು.

ಸಾಮಾಜಿಕ, ಆರ್ಥಿಕ ಇನ್ನೂ ಮುಂತಾದ ಬಿಕ್ಕಟ್ಟುಗಳನ್ನು ಎದುರಿಸುತ್ತಾ ಬಂದ ಈ ಗುಂಪುಗಳು ಅದರಿಂದ ಹೊರಬರುವ ಸಲುವಾಗಿ ಕಾಲಕಾಲಕ್ಕೆ ಬಂದ ಸಮಾಜ ಸುಧಾರಕರ ಚಿಂತನೆಗಳನ್ನು ಹಿಂಬಾಲಿಸಿದವು ಎನ್ನಬಹುದು. ಹೀಗೆ ಬಹು ಹಿಂದಿನಿಂದಲೂ ಹೊಸ ಚಿಂತನೆಗಳೊಂದಿಗೆ ಪರಿವರ್ತನೆಯನ್ನು ಬಯಸಿ ಮಾಡಿದ ಪ್ರಯತ್ನಗಳು ನಮ್ಮ ಪ್ರಾಚೀನ ಸಾಹಿತ್ಯಗಳಲ್ಲಿ ದಾಖಲಾಗಿವೆ. ಪ್ರಭುತ್ವ ನೀತಿಯಿಂದಾಗಿ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡ ಗುಂಪುಗಳು ಬೇರೆ ಬೇರೆ ಧರ್ಮಗಳ ಆಕರ್ಷಣೆಗೆ ಒಳಗಾಗಿದ್ದವು. ಆ ಧರ್ಮಗಳ ನಂಬಿಕೆಗಳನ್ನು ಅಳವಡಿಸಿಕೊಂಡವು. ಪ್ರಾರಂಭದಲ್ಲಿ ರಾಜಕೀಯ ನೀತಿ ಹಾಗೂ ಧಾರ್ಮಿಕ ನೀತಿಗಳ ಹಿಡಿತಕ್ಕೆ ಒಳಗಾದರೂ ಆನಂತರ ಅವುಗಳ ಕುಂದುಕೊರತೆಯನ್ನು ಮನಗಂಡು ಅದರಿಂದ ಪಾರಾಗಲು ಹೋರಾಟವನ್ನು ಕೈಗೊಂಡವು.

ಇಂತಹ ಹೋರಾಟವನ್ನು ನಮ್ಮ ಸಾಹಿತಿಗಳು ಪ್ರಾರಂಭದಿಂದಲೂ ಗುರುತಿಸುತ್ತಾ ಬಂದಿದ್ದಾರೆ. ಹಾಗು ಸಾಹಿತ್ಯದ ರೂಪ, ಭಾಷೆ, ಶೈಲಿ, ವಸ್ತು ಈ ಅಂಶಗಳಲ್ಲಿಯೂ ಹೊಸ ಹೊಸ ಪ್ರಯೋಗಗಳು ಮೂಡಿಬಂದವು. ಇವುಗಳನ್ನು ಬಂಡಾಯದ ಅಂಶವೆಂದು ಗುರುತಿಸಬಹುದು. ಈ ಹೋರಾಟವು ತೀವ್ರವಾದದ್ದು ಬಹುಶಃ ೧೨ನೇ ಶತಮಾನದಲ್ಲಿಯೇ ಎನ್ನಬಹುದು. ಹನ್ನೆರಡನೇ ಶತಮಾನದ ವಚನ ಚಳವಳಿಯು ಸಾಮಾಜಿಕ ಹಾಗು ಸಾಹಿತ್ಯಿಕವಾದ ಬದಲಾವಣೆಯನ್ನು ತಂದಿತು. ಭಕ್ತಿ ಆ ಚಳವಳಿಯ ಮುಖ್ಯ ಅಂಶವಾದರೂ ಜಾತೀಯತೆಯ ವಿರೋಧ, ಲಿಂಗತಾರತಮ್ಯದ ವಿರೋಧ, ವರ್ಗ, ವರ್ಣಗಳ ಆಚರಣೆಯನ್ನು ವಿರೋಧ

ಮಾಡುತ್ತಾ ಬಂದಿತು. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ' ಎನ್ನುವಂತೆ ಲೌಕಿಕದಲ್ಲಿ ಬೇಧಭಾವವಿಲ್ಲದೆ ಸಹಜೀವನವನ್ನು ನಡೆಸುವುದು ಶಿವಪಥವೆಂದು ಸಾರಿ ಹೇಳಿದರು. ಲೌಕಿಕದಿಂದ ಪಾರಲೌಕಿಕಕ್ಕೆ ಜಿಗಿಯುವ ಮಾರ್ಗವನ್ನು ಸಾರುತ್ತಾ ಸಮಾಜಮುಖಿಯಾಗಿ ಚಿಂತಿಸತೊಡಗಿದರು. ಈ ನಿಟ್ಟಿನಲ್ಲಿ ಅಲ್ಲಮಪ್ರಭು, ಅಕ್ಕಮಹಾದೇವಿ, ಬಸವಣ್ಣ, ಸಿದ್ಧರಾಮ, ಮಾರಯ್ಯ, ಲಕ್ಕಮ್ಮ, ಇನ್ನು ಮುಂತಾದ ಶರಣರು ವಚನ ಚಳವಳಿಯಲ್ಲಿ ಭಾಗಿಯಾದರು. ಇದಕ್ಕೂ ಹಿಂದೆ ಪುರಾಣಗಳಲ್ಲಿಯೂ ದುಷ್ಟಶಿಕ್ಷಣ, ಶಿಷ್ಟರಕ್ಷಣ ಎಂಬ ಭಾವನೆಗಳು ವ್ಯಕ್ತವಾಗಿದ್ದವು. ಆ ನಂತರ ಕನ್ನಡ ಸಾಹಿತ್ಯದ ಪ್ರಾರಂಭದ ಕೃತಿಗಳಲ್ಲಿ ಸಂಸ್ಕೃತ ಸಾಹಿತ್ಯದ ಪ್ರಭಾವ ದಟ್ಟವಾಗಿದ್ದರೂ ಅಲ್ಲಿಯ ಪ್ರಸಿದ್ಧ ಕೃತಿಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಮಾಡಿದುದು ನಿಜವಾಗಿಯೂ ಸ್ವಕೀಯತೆಯನ್ನು ಬಿಂಬಿಸುತ್ತದೆ. ಈ ಸಂದರ್ಭದಲ್ಲಿ ಧಾರ್ಮಿಕ ಹಿಡಿತವಿದ್ದು, ಮುಖ್ಯವಾಗಿ ಜೈನಧರ್ಮವು ಕನ್ನಡ ಸಾಹಿತ್ಯದ ಮೇಲೆ ಹೆಚ್ಚು ಪ್ರಭಾವ ಬೀರಿದೆ ಎನ್ನಬಹುದು. ಹಾಗಾಗಿಯೇ ಪಂಪಯುಗದ ಬಹುತೇಕ ಕವಿಗಳು ಈ ಧರ್ಮದ ಮಹಾಪುರುಷರ ಬಗ್ಗೆ ಕಾವ್ಯ ರಚಿಸಿದರು. ಆದರೆ ಜೈನಧರ್ಮಕ್ಕಿಂತಲೂ ಹಿಂದಿನಿಂದಲೂ ಇರುವ ಸನಾತನ ಹಿಂದೂಧರ್ಮವನ್ನು ಅನುಸರಿಸುವ ಮಂದಿ ಸಮಾಜದಲ್ಲಿ ಬಹುಸಂಖ್ಯಾರಾಗಿದ್ದು ಅವರಿಗೆ ಬೇಕಾದ ರಾಮಾಯಣ ಹಾಗು ಮಹಾಭಾರತವನ್ನು ಇದೇ ಸಂದರ್ಭದಲ್ಲಿ ಕನ್ನಡಕ್ಕೆ ತರಲಾಯಿತು.

ಆ ನಂತರ ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಚಳವಳಿಯು ಭಾಷೆ, ವಸ್ತು, ಛಂದಸ್ಸು ಎಲ್ಲದರಲ್ಲಿಯೂ ಪ್ರಮುಖ ಬದಲಾವಣೆಯನ್ನು ತಂದು, ಸಾಮಾಜಿಕವಾಗಿಯೂ ತನ್ನ ಪ್ರಭಾವವನ್ನು ಬೀರಿತು. ೧೫-೧೬ನೇ ಶತಮಾನದಲ್ಲಿ ಕಂಡು ಬಂದ ದಾಸ ಸಾಹಿತ್ಯದಲ್ಲಿಯೂ ಭಕ್ತಿ ಹಾಗೂ ಸಮಾಜೋದ್ಧಾರವೇ ಮುಖ್ಯ ಅಂಶವಾಗಿದ್ದು ಈ ಎರಡು ಬಗೆಯ ಸಾಹಿತ್ಯದಲ್ಲಿಯೂ ಬಂಡಾಯದ ಅಂಶಗಳನ್ನು ಗುರುತಿಸಬಹುದು.

ಆನಂತರದಲ್ಲಿ ಭಾರತೀಯ ಸಮಾಜದ ಮೇಲೆ ಆದ ವಿದೇಶೀಯರ ಆಕ್ರಮಣದ ಫಲವಾಗಿ, ಈ ಸಮಾಜ ಅನೇಕ ಸ್ಥಿತ್ಯಂತರಗಳನ್ನು ಕಂಡುಕೊಳ್ಳತೊಡಗಿತು. ಆಧುನಿಕತೆಯ ಪ್ರಭಾವ, ರಾಜಕೀಯ ಸಂಘರ್ಷಗಳು, ಧಾರ್ಮಿಕ ನಂಬಿಕೆಗಳ ಅಪಮೌಲ್ಯ, ಕೌಟುಂಬಿಕ ನೆಲೆಯಲ್ಲಿ ಬದಲಾವಣೆ, ಹೀಗೆ ಅನೇಕ ವಿಷಯಗಳಿಗೆ ಇಡೀ ಸಮಾಜ ಎದುರಾಗತೊಡಗಿತು. ಹದಿನೇಳನೇ ಶತಮಾನದಿಂದೀಚೆಗಿನ ಸಾಹಿತ್ಯದಲ್ಲಿ ಹೊನ್ನಮ್ಮ, ಸರ್ವಜ್ಞ, ಜಗನ್ನಾಥದಾಸ, ಮುಮ್ಮಡಿ ಕೃಷ್ಣರಾಜ, ಕೆಂಪುನಾರಾಯಣ ಮುಂತಾದ ಕವಿಗಳು ಬೆಳಕಿಗೆ ಬಂದರೂ ಸಾಮಾಜಿಕವಾದ ದೃಷ್ಟಿಯಿಂದ ಕಾವ್ಯ ಬರೆದದ್ದು ಕಡಿಮೆಯೇ. ಭಾಷೆ ಹಾಗು ಶೈಲಿಯಲ್ಲಿ ಮಾತ್ರ ಸ್ವಲ್ಪ ಮಟ್ಟಿನ ಬದಲಾವಣೆಯನ್ನು ಪಡೆಯಿತು.

ತದನಂತರ ೨೦ನೇ ಶತಮಾನದಲ್ಲಿ ರಚನೆಯಾದ ಸಾಹಿತ್ಯದಲ್ಲಿ ವೈವಿಧ್ಯತೆ ಕಂಡು ಬಂದಿತು. ಆಡು ಮಾತಿನಲ್ಲಿ ಸಾಹಿತ್ಯವು ರಚನೆಯಾಗತೊಡಗಿತು. ಈ ಶತಮಾನದ ಸಾಹಿತ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯ ಚಿಂತನೆಗಳು ಹಾಗೂ ಭಾರತೀಯ ಸಾಮಾಜಿಕ ಚಿಂತನೆಗಳು ಪ್ರಮುಖ ಪ್ರಭಾವವನ್ನು ಬೀರಿದವು.

ಕಳೆದ ಶತಮಾನದ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ ಹಾಗು ಬಂಡಾಯವೆಂದು ವಿಭಾಗಿಸಲಾಗಿದ್ದು, ಇಲ್ಲಿಯೂ ಬಂಡಾಯದ ವಿಭಿನ್ನ ನೆಲೆಗಳನ್ನು ಗುರುತಿಸಬಹುದಾಗಿದೆ.

ಪ್ರಮುಖವಾಗಿ ಗಾಂಧೀಜಿಯವರ ವಿಚಾರಗಳ ಮೂಲಕ ಪ್ರೇರಿತವಾದ ಅನೇಕ ಸಾಹಿತ್ಯ ಕೃತಿಗಳನ್ನು ಗಮನಿಸಬಹುದು. ಹಾಗೆಯೇ ಭಾರತೀಯ ಸಮಾಜವಾದಿ ಚಿಂತಕರಾದ ಲೋಹಿಯಾರವರ ವಾದಗಳೂ, ಸಾಹಿತ್ಯದ ಮೇಲೆ ತಮ್ಮ ಪ್ರಭಾವನನ್ನು ಬೀರಿದೆ. ಬಿ. ಆರ್. ಅಂಬೇಡ್ಕರ್, ಎಂ. ಎನ್. ರಾಯ್, ಸ್ವಾಮಿ ವಿವೇಕಾನಂದರು ಮೊದಲಾದವರ ವೈಚಾರಿಕತೆಯಿಂದ ಪ್ರಭಾವಿತವಾದ ಸಾಹಿತ್ಯದಲ್ಲಿ ಬಂಡಾಯದ ಅಂಶವಿದೆ. ಸ್ವತಂತ್ರ್ಯ ಹೋರಾಟದ ಅಂಶಗಳು ೨೦ನೇ ಶತಮಾನದ ಸಾಹಿತ್ಯದಲ್ಲಿ ಹೇರಳವಾಗಿ ಕಂಡು ಬರುತ್ತವೆ. ಸ್ವಾತಂತ್ರ್ಯಾನಂತರ ರೂಪಿಸಿಕೊಳ್ಳಲಾದ ಸಾಮಾಜಿಕ ಸಂಸ್ಥೆಯಾದ ಪ್ರಜಾಪ್ರಭುತ್ವವು ಸಮಾಜದಲ್ಲಿ ತಂದ ಸಮಾನತೆಗಳು ಸಾಹಿತ್ಯದಲ್ಲಿ ತನ್ನ ಪ್ರಭಾವವನ್ನು ಬೀರಿದೆ.

೨೦ನೇ ಶತಮಾನದ ಸಾಹಿತ್ಯವು ಸಾಮಾಜಿಕ ನ್ಯಾಯ ಹಾಗು ಆಧ್ಯಾತ್ಮಿಕ ಗುಣಧರ್ಮಗಳಿಂದ ಕೂಡಿದ್ದು. ಸಾಮಾಜಿಕ ಚಿಂತನೆ ಹಾಗು ಸೃಜನಶೀಲತೆಯನ್ನು ಹಿಂದೆಂದಿಗಿಂತ ಇಲ್ಲಿ ಹೆಚ್ಚು ಹೆಚ್ಚು ಕಾಣಬಹುದು. ಅರ್ಧ ಶತಮಾನದಷ್ಟು ಕಾಲ ತನ್ನ ಪ್ರಭಾವವನ್ನು ಬೀರಿದ ನವೋದಯ ಸಾಹಿತ್ಯದಲ್ಲಿ ಬೇಂದ್ರೆಯವರ 'ಕುರುಡು ಕಾಂಚಾಣ', ಕುವೆಂಪುರವರ 'ಕಲ್ಕಿ' ಪದ್ಯಗಳಲ್ಲಿ ಸಾಮಾಜಿಕ ನ್ಯಾಯದ ಹಸಿವು ಇರುವುದನ್ನು ಕಾಣಬಹುದು. ನವೋದಯದ ಈ ಪ್ರಭಾವವು ಮುಂದಿನ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ನವೋದಯದ ಬಂಡಾಯ ಮುಂದಿನ ಸಾಹಿತ್ಯಗಳಲ್ಲಿ ಮತ್ತಷ್ಟು ಪ್ರಖರವಾಯಿತು. 'ನವ್ಯ' ಸಾಹಿತ್ಯದ ಬಂಡಾಯವು ಇದಕ್ಕಿಂತ ಸ್ವಲ್ಪ ಭಿನ್ನವಾಗಿದ್ದು, ಕೇವಲ ವಾಚ್ಯಾರ್ಥಗಳಿಂದ ಉಂಟಾಗುವ ಅರ್ಥಕ್ಕಿಂತ ಭಿನ್ನವಾದ ಒಳತುಡಿತವಿರುವುದು ಕಂಡು ಬರುತ್ತದೆ. ಆ ಒಳ ತುಡಿತಗಳು ಸಾಮಾಜಿಕ ನ್ಯಾಯಕ್ಕಾಗಿ ಹಾತೊರೆಯುವುದನ್ನು ಕಾಣಬಹುದು.

ನವೋದಯ ಕಾಲದ ಸಾಹಿತ್ಯದಲ್ಲಿ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗಳೆರಡೂ ಒಟ್ಟೊಟ್ಟಿಗೆ ಬಂದು ಸಾಹಿತ್ಯ ಮತ್ತು ಸಮಾಜ ಎರಡನ್ನೂ ಕುರಿತು ಮಾತನಾಡಿದೆ. ಎರಡನ್ನೂ ಕುರಿತು ವಿಮರ್ಶಿಸಿದೆ. ಈ ಹಂತದಲ್ಲಿ ಕನ್ನಡ ಸಾಹಿತ್ಯ ಪುನರುಜ್ಜೀವನವನ್ನು ಪಡೆಯಿತೆನ್ನಬಹುದು.  ಬಿ.ಎಂ. ಶ್ರೀ., ಗೋವಿಂದ ಪೈ, ಕುವೆಂಪು, ಬೇಂದ್ರೆ, ಪು.ತಿ.ನ. ಮುಂತಾದವರು ಈ ನಿಟ್ಟಿನಲ್ಲಿ ಕಾವ್ಯ ರಚಿಸಿದ್ದಾರೆ.

ಪ್ರಗತಿಶೀಲ ಸಾಹಿತ್ಯ ಚಳವಳಿಯಲ್ಲಿ ಕನ್ನಡದ ಲೇಖಕರು ಸಮಾಜ ಸುಧಾರಣೆಯನ್ನು ಮುಖ್ಯ ಅಂಶವನ್ನಾಗಿ ಪ್ರತಿಪಾದಿಸತೊಡಗಿದರು. ಎಡಪಂಥೀಯವಾದ ಆಲೋಚನೆಗಳು ಇವರ ಬರವಣಿಗೆಯನ್ನು ಗಟ್ಟಿಗೊಳಿಸಿದವು. ಸ್ವಾತಂತ್ರ್ಯ, ಸಮಾನತೆ, ಸೋದರತ್ವ ಈ ಕಾಲಘಟ್ಟದ ಸಾಮಾಜಿಕ ಬಂಡಾಯದ ಅಂಶಗಳಾದವು. ಕೌಟುಂಬಿಕ ಹಾಗು ಸಾಮಾಜಿಕ ಶೋಷಣೆಯ ವಿರುದ್ಧವಾಗಿ ಮಾನವೀಯ ನೆಲೆಯಿಂದ ಪ್ರತಿಭಟಿಸುವ ಸಾಹಿತ್ಯ ಈ ಹಂತದಲ್ಲಿ ಸೃಷ್ಟಿಯಾಯಿತು. ವಿಶ್ವ ಸಮರಗಳಿಂದ ಆದ ಪರಿಣಾಮಗಳು ಈ

ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಕೌಟುಂಬಿಕ ನೆಲೆಯಲ್ಲಿ ಹೆಚ್ಚು ಹೆಚ್ಚು ಸಾಹಿತ್ಯ ರಚನೆಯಾದವು. ಈ ಕಾಲಘಟ್ಟದಲ್ಲಿ ರಚನೆಯಾದ ಸಾಹಿತ್ಯವು ಜನರಿಗೆ ಹೆಚ್ಚು ಹೆಚ್ಚು ತಲುಪಿದವು ಎನ್ನಬಹುದು. ಕೌಟುಂಬಿಕ ನೆಲೆಯನ್ನು ಆಯ್ದುಕೊಂಡು ಬರೆದ ತ್ರಿವೇಣಿ, ಅನುಪಮಾ ನಿರಂಜನ, ಎಂ. ಕೆ. ಇಂದಿರಾ ಮುಂತಾದವರು ಈ ಕಾಲದ ಪ್ರಮುಖ ಲೇಖಕಿಯರು. ಅ.ನ.ಕೃ.ರವರ ಕಾದಂಬರಿಗಳು 'ಬದುಕು ಸ್ವೀಕಾರಾರ್ಹ' ಎಂಬುವ ನೆಲೆಯಲ್ಲಿ ಮೂಡಿ ಬಂದಿತು. ಆಶಾವಾದ, ವಾಸ್ತವವಾದ, ಸಮತಾವಾದ, ಇದರ ಆಶಯವಾಗಿದ್ದು ದಬ್ಬಾಳಿಕೆ, ಹಸಿವು, ಕುತಂತ್ರ ಮುಂತಾದವುಗಳನ್ನು ಎಲ್ಲ ಹಂತದಲ್ಲಿಯೂ ವಿರೋಧಿಸಬೇಕೆಂಬುದು ಇದರ ಉದ್ದೇಶ. ಸಾಹಿತ್ಯವು ಸಾಮಾಜಿಕ ಕ್ರಾಂತಿಯನ್ನು ಸಾಧಿಸುವುದು ಮುಖ್ಯವೆಂದು ಇಲ್ಲಿನ ಸಾಹಿತಿಗಳ ನಂಬಿಕೆ. ಅ.ನ.ಕೃ., ಬಸವರಾಜ ಕಟ್ಟೀಮನೆ, ತ.ರಾ.ಸು. ಚದುರಂಗ ಇವರುಗಳು ಪ್ರಗತಿಶೀಲ ಸಾಹಿತ್ಯದ ಪ್ರಮುಖ ಲೇಖಕರಾಗಿದ್ದು ಸಣ್ಣಕತೆಗಳು ಹಾಗು ಕಾದಂಬರಿಗಳು ಇವರ ಅಭಿವ್ಯಕ್ತಿಯ ಮಾಧ್ಯಮವಾಗಿದೆ. ಅ.ನ.ಕೃ.ರವರ 'ನಗ್ನ ಸತ್ಯ', ಕಟ್ಟೀಮನಿಯವರ 'ಬೀದಿಯಲ್ಲಿ ಬಿದ್ದವಳು', ನಿರಂಜನರ 'ಕೊನೆಯ ಗಿರಾಕಿ'ಇವು ಸ್ತ್ರೀ ಸಂವೇದನೆಯನ್ನು ಒಳಗೊಂಡು ಬಂದ ಕ್ರೂರ ವಾಸ್ತವತೆಯನ್ನು ಜರಿಯುವ ಅಂಶಗಳನ್ನು ಒಳಗೊಂಡಿದೆ. ಐತಿಹಾಸಿಕ ಕಥೆಯನ್ನು ಒಳಗೊಂಡ 'ನೃಪತುಂಗ', 'ದುರ್ಗಾಸ್ತಮಾನ' ಮುಂತಾದ ಕಾದಂಬರಿಯು ಇದೇ ಪ್ರಗತಿಪರ ಆಲೋಚನೆಯನ್ನು ಒಳಗೊಂಡಿದೆ. ಸಮಾಜದ ಎಲ್ಲ ವರ್ಗದ ಜನರ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ನೋಡಿ ಆತ್ಮೀಯವಾಗಿ ಚಿತ್ರಿಸುವುದು ಇಲ್ಲಿಯ ಗುಣವಾಗಿದೆ. ಇದೇ ಮುಂದೆ ನವ್ಯ ಸಾಹಿತ್ಯದಲ್ಲಿ ಇನ್ನೂ ಬೆಳೆದ ಬಂಡಾಯವಾಗಿ ಕಾಣಿಸಿಕೊಳ್ಳುತ್ತದೆ.

ನವ್ಯ ಸಾಹಿತ್ಯದ ಬಂಡಾಯದ ಅಂಶಗಳು ನವೋದಯ ಹಾಗು ಪ್ರಗತಿಶೀಲ ಸಾಹಿತ್ಯ ಘಟ್ಟಗಳ ಬಂಡಾಯದ ಅಂಶಗಳಿಗಿಂತ ವಿಭಿನ್ನವಾಗಿದೆ. ವೈಯಕ್ತಿಕ ಜೀವನ ಮತ್ತು ಜೀವನದ ಅರ್ಥವನ್ನು ಹುಡುಕುವುದು ಇಲ್ಲಿಯ ಮುಖ್ಯಾಂಶ.

ಈ ಹಿಂದಿನ ನವೋದಯ ಹಾಗು ಪ್ರಗತಿಶೀಲ ಸಾಹಿತಿಗಳು ಸಾಮಾಜಿಕ ಪಿಡುಗುಗಳನ್ನು ಕೌಟುಂಬಿಕ ನೆಲೆಯಲ್ಲಿ ವಿಮರ್ಶಿಸಿದರೆ ನವ್ಯದ ಲೇಖಕರು ಇದೇ ಅಂಶವನ್ನು ವ್ಯಕ್ತಿಕೇಂದ್ರಿತ ನೆಲೆಯಲ್ಲಿಯೂ ಸಾಮಾಜಿಕ ನೆಲೆಯಲ್ಲಿಯೂ ವಿಮರ್ಶಿಸಿ ಬರೆಯುತ್ತಾರೆ. ನವ್ಯದ ಲೇಖಕರಿಗೆ ಪಾಶ್ಚಾತ್ಯ ನವ್ಯ ಸಾಹಿತ್ಯದ ಪ್ರಭಾವವಿರುವುದನ್ನು ಹಾಗು ಭಾರತೀಯ ಸಾಮಾಜಿಕ ಸನ್ನಿವೇಶಗಳ ಪ್ರಭಾವವಿರುವುದನ್ನು ಕಾಣಬಹುದು. ಹಾಗಾಗಿಯೇ ಇದು ಹೆಚ್ಚು ವಿಮರ್ಶೆಗೆ ಒಳಗಾದ ಸಾಹಿತ್ಯವಾಗಿದೆ. ಎಂದರೆ ವಿಮರ್ಶೆಗೆ ಹೆಚ್ಚು ಅವಕಾಶವಿರುವುದನ್ನು ಇಲ್ಲಿ ಕಾಣಬಹುದು. ಇಲ್ಲಿ ವಿಮರ್ಶೆಯ ಸಾಹಿತ್ಯವನ್ನು ಸಮರ್ಥಿಸಿಕೊಳ್ಳುವ ಪ್ರಯತ್ನದಂತೆ ಕಂಡು ಬಂದಿದೆ. ಹಿಂದಿನ ಸಾಹಿತಿಗಳಿಗಿಂತ ಇವರು ವಿಮರ್ಶೆಗೆ ಹೆಚ್ಚು ಸ್ಪಂದಿಸಿದ್ದಾರೆ ಎನ್ನಬಹುದು. ಕೃತಿಯೊಂದಿಗೆ ಸಾಹಿತಿಯೂ ವಿಮರ್ಶೆಗೆ ಒಳಗಾದದ್ದು ಇಲ್ಲಿ ಕಂಡು ಬರುತ್ತದೆ.

ನವ್ಯದ ಕಾದಂಬರಿಗಳಲ್ಲಿ ಬರುವ ಪಾತ್ರಗಳು ನೇರವಾಗಿ ತಮ್ಮ ಮಾತುಗಳಲ್ಲಿ ಬಂಡಾಯವನ್ನು

ಪ್ರಕಟಪಡಿಸದಿದ್ದರೂ ಒಟ್ಟಾರೆ ತಮ್ಮ ವರ್ತನೆಯಲ್ಲಿ ಬಂಡಾಯವನ್ನು ವ್ಯಕ್ತಪಡಿಸುತ್ತವೆ. ನವೋದಯ, ಪ್ರಗತಿಶೀಲರಲ್ಲಿ ಬಂಡಾಯವು ಸ್ವಲ್ಪಮಟ್ಟಿಗೆ ಸಾಮಾಜಿಕ ಆಯಾಮವನ್ನು ಹೊಂದಿದ್ದರೆ ನವ್ಯದ ಬಹುತೇಕ ಕಾದಂಬರಿಗಳಲ್ಲಿ ಇನ್ನಷ್ಟು ಸ್ಪಷ್ಟವಾಗುತ್ತದೆ. ನವ್ಯ ಸಾಹಿತ್ಯದಲ್ಲಿ ಹೆಸರಾದ ಅಡಿಗರ ಅನೇಕ ಕವನಗಳು ಸಮಾಜವಾದಿ ನೆಲೆಯಲ್ಲಿಮೂಡಿದವಾಗಿದೆ.

ಸಾಮಾಜಿಕ ಸಮಸ್ಯೆಯನ್ನು ವ್ಯಕ್ತಿಯ ನೆಲೆಯಲ್ಲಿ ಚಿಂತಿಸುವ ಕ್ರಮವನ್ನು ಇಲ್ಲಿ ಬೆಳೆಸಿಕೊಳ್ಳಲಾಗಿದೆ. ಪಾಶ್ಚಾತ್ಯ ಸಾಹಿತ್ಯ ಚಿಂತಕರಾದ ಸಾರ್ತ್ರೆ, ಕಾಮು, ಕಾಫ್ಕ ಮುಂತಾದವರ ಚಿಂತನೆಗಳು ಈ ಸಾಹಿತ್ಯದ ದಿಕ್ಕನ್ನೇ ಬದಲಿಸಿತು. ಮುಕ್ತಿ, ಭಾರತೀಪುರ, ಸಂಸ್ಕಾರ, ಬಿರುಕು ಮುಂತಾದ ಕಾದಂಬರಿಗಳು ಈ ಪ್ರಭಾವದಿಂದ ಬಂದದ್ದಾಗಿದೆ. ಭಾಷೆಯ ವಿಷಯದಲ್ಲಿಯೂ ಕಲಾತ್ಮಕವಾದ ಭಾಷೆಯನ್ನು ಇಲ್ಲಿ ಕಾಣಬಹುದು. ಸಾಮಾಜಿಕ ಸಮಸ್ಯೆಗಳಿಗೆ ವೈಯಕ್ತಿಕ ಜೀವನದಲ್ಲಿ ಉತ್ತರವನ್ನು ಹುಡುಕುವುದು, ವೈಯಕ್ತಿಕ ಸಮಸ್ಯೆಗೆ ಸಮಾಜದ ಮುಖಾಂತರ ಪರಿಹಾರಗಳನ್ನು ಪಡೆಯುವುದು ಇಲ್ಲಿ ಕಂಡುಬರುತ್ತದೆ.

ಅನಂತಮೂರ್ತಿಯವರು ನವ್ಯ ಸಾಹಿತಿಯಾಗಿದ್ದು ಅವರ ಕಾದಂಬರಿಗಳಲ್ಲಿ ಈ ಅಂಶಗಳಿರುವುದನ್ನು ಕಾಣಬಹುದು. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಎ.ಕೆ. ರಾಮಾನುಜನ್, ಪಿ. ಲಂಕೇಶ್, ಚಂದ್ರಶೇಖರ ಕಂಬಾರ, ದೇವನೂರು ಮಹಾದೇವ, ಶಾಂತಿನಾಥ ದೇಸಾಯಿ ಮುಂತಾದವರು ನವ್ಯ ಸಾಹಿತ್ಯದಲ್ಲಿ ಪ್ರಮುಖರೆನಿಸಿಕೊಳ್ಳುತ್ತಾರೆ.

ನವೋದಯ, ಪ್ರಗತಿಶೀಲ, ನವ್ಯ ಈ ಮೂರೂ ಪ್ರಕಾರದ ಸಾಹಿತ್ಯದಲ್ಲಿಯ ಬಂಡಾಯದ ಅಂಶಗಳಿಗಿಂತ ನವ್ಯೋತ್ತರ ಸಾಹಿತ್ಯದಲ್ಲಿ (ಬಂಡಾಯ ಸಾಹಿತ್ಯ) ವೈಚಾರಿಕವಾಗಿಯೂ ಕ್ರಿಯಾಶೀಲವಾಗಿಯೂ ಬಂಡಾಯ ಪ್ರಕಟವಾಗಿದೆ. ಜಾತಿ, ಲಿಂಗ, ವರ್ಗಗಳ ಅಸಮಾನತೆಯ ವಿರುದ್ಧ ಇದು ಬಂಡೆದ್ದಿದೆ. ಶೋಷಿತರ ಪರವಾದ ದನಿ ಈ ಸಾಹಿತ್ಯದಲ್ಲಿ ಕಾಣಬಹುದು. ಸ್ಥಗಿತ ಸಂಪ್ರದಾಯಗಳಿಂದ ಮುಕ್ತರಾಗುವ ದೃಷ್ಟಿಕೋನದಿಂದ ಸಾಮಾಜಿಕ ಹೋರಾಟಗಳು ರೂಪುಗೊಂಡು ಜಾಗತೀಕರಣ, ಉದಾರೀಕರಣಗಳಿಂದ ದೇಶಕ್ಕೆ ಆಗುತ್ತಿರುವ ತೊಂದರೆಗಳ ವಿರುದ್ಧ ದನಿ ಎತ್ತಿದೆ. ದಲಿತ ಸಂವೇದನೆ, ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆ, ಗ್ರಾಮಸಂವೇದನೆಗಳಿಂದ ಈ ಸಾಹಿತ್ಯವು ಕೂಡಿದ್ದು ಸ್ವಕೀಯ ಪ್ರಜ್ಞೆ ಹಿಂದೆಂದಿಗಿಂತಲೂ ಹೆಚ್ಚಾಗಿ ಕಂಡುಬರುತ್ತದೆ. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿಯ ಪ್ರಭಾವವೂ ಇಲ್ಲಿ ಆಗಿದೆ. ಪ್ರಾದೇಶಿಕ ಭಾಷೆಗಳಿಗೆ ಹೆಚ್ಚಿನ ಒತ್ತು ನೀಡಿದ್ದು ಇದರ ಮಹತ್ವವಾಗಿದೆ. ಇಲ್ಲಿ ಸಾಂಸ್ಕೃತಿಕ ಅಧ್ಯಯನಗಳು ಈ ಹಂತದಲ್ಲಿ ಹೆಚ್ಚಾಗಿದ್ದು ಸಮಾಜವಾದಿ ನೆಲೆಯಲ್ಲಿ ಸಾಹಿತ್ಯವೂ, ವಿಮರ್ಶೆಯೂ ಮೂಡಿ ಬಂದಿದೆ. ಕಾಲಕಾಲಕ್ಕೆ ಎದುರಾಗುವ ಸಾಮಾಜಿಕ ಸಮಸ್ಯೆಗಳ ವಿರುದ್ಧ ಸಮಾಜದಲ್ಲಿ ಆಗುವ ಪ್ರತಿಭಟನೆಗಳ ಜೊತೆ ಜೊತೆಗೇ ಇಲ್ಲಿ ಸಾಹಿತ್ಯವೂ ಕೈ ಜೋಡಿಸಿದೆ ಎನ್ನಬಹುದು. ಇದು ಒಬ್ಬ ವ್ಯಕ್ತಿ, ಒಂದು ತತ್ವವನ್ನು ನಂಬಿ ನಿಂತದ್ದಲ್ಲವೆಂದು ಹೇಳಬಹುದು. ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್, ಜಯಪ್ರಕಾಶ್‌ನಾರಾಯಣ್

ಮುಂತಾದವರ ಪ್ರೇರಣೆ ಈ ಸಾಹಿತ್ಯದ ಮೇಲೆ ಆಗಿದೆ. ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಸಿದ್ಧಲಿಂಗಯ್ಯ, ಬಿ.ಟಿ. ಲಲಿತಾ ನಾಯಕ್, ಶಶಿಕಲಾ ವಸ್ತ್ರದ, ಅರವಿಂದ ಮಾಲಗತ್ತಿ ಮುಂತಾದ ಸಾಹಿತಿಗಳನ್ನು ಈ ನಿಟ್ಟಿನಲ್ಲಿ ಗುರುತಿಸಬಹುದು.

ಶತಶತಮಾನಗಳಿಂದಲೂ ಲಿಖಿತ ಸಾಹಿತ್ಯದ ಬೇರಾಗಿರುವ ಜನಪದ ಸಾಹಿತ್ಯದಲ್ಲಿ ಬಂಡಾಯದ ಅಂಶಗಳು ಬಹುವಾಗಿ ಕಂಡು ಬರುತ್ತದೆ. ಶಿಷ್ಟ ಸಾಹಿತ್ಯಕ್ಕಿಂತ ವಿಭಿನ್ನವಾದ, ಆಡುಭಾಷೆಯಲ್ಲಿ ಅಭಿವ್ಯಕ್ತಗೊಂಡ ಈ ಸಾಹಿತ್ಯವು ಶ್ರಮಜೀವಿಗಳಿಂದಲೇ ಹೆಚ್ಚಾಗಿ ರೂಪುಗೊಂಡದ್ದು. ಹಾಗಾಗಿ ಅವರ ನೋವು ನಲಿವುಗಳ ಸ್ಪಷ್ಟ ಚಿತ್ರಣ ಇಲ್ಲಿದ್ದು, ಅಲ್ಲಲ್ಲಿ ದಬ್ಬಾಳಿಕೆಯ ವಿರೋಧಿ ಪ್ರತಿಭಟನೆಗಳು ಕಂಡು ಬಂದಿದೆ. ಈ ಜನಪದರ ಹೋರಾಟಕ್ಕೆ ಯಾವುದೇ ವಿದೇಶೀ ಪ್ರಭಾವ ಇರುವುದಿಲ್ಲ. ಅದು ನಿಂತ ನೀರಾಗದೆ ನಿರಂತರವಾಗಿರುವ ಸಾಹಿತ್ಯವಾಗಿದೆ.

ಈ ಹಿನ್ನೆಲೆಯಲ್ಲಿ ಯು. ಆರ್. ಅನಂತಮೂರ್ತಿಯವರ ಐದು ಕಾದಂಬರಿಗಳನ್ನು ಇಲ್ಲಿ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಇವರ ಕಾದಂಬರಿಯ ರಚನೆಗೆ ಕಾರಣವಾದ ವೈಚಾರಿಕ ಹಿನ್ನೆಲೆಯನ್ನು ಇಲ್ಲಿ ಗುರುತಿಸಲಾಗಿದೆ. ಪಾಶ್ಚಾತ್ಯ ಸಾಹಿತ್ಯ ವಿಮರ್ಶಕರ ದೃಷ್ಟಿ ಆಹಗು ಸಮಕಾಲೀನ ಭಾರತೀಯ ಸಮಾಜದ ಸ್ಥಿತಿಗತಿಗಳು ಇವರ ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದು ನವ್ಯ ಹಾಗು ಬಂಡಾಯದ ಗುಣಗಳೆರಡೂ ಇವರ ಸಾಹಿತ್ಯದಲ್ಲಿರುವುದನ್ನು ಕಾಣಬಹುದು. ಹಾಗಾಗಿಯೆ ಸಮಾಜೋ ಸಾಹಿತ್ಯಿಕ ಅಧ್ಯಯನವನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ.

ಅನಂತಮೂರ್ತಿಯವರ ಸಾಧನೆಯ ಹಾದಿಯನ್ನು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಸಾಧನೆಗಳನ್ನು ಸಂಗ್ರಹವಾಗಿ ಅಧ್ಯಯನ ಮಾಡಲಾಗಿದೆ. ಹಾಗೆಯೇ ಅವರ ವೈಯಕ್ತಿಕ ಜೀವನದ ಕೆಲವು ಪ್ರಮುಖ ಘಟನೆಗಳನ್ನು ಸಂಗ್ರಹಿಸಲಾಗಿದೆ. ಚಿಕ್ಕಂದಿನಿಂದಲೂ ಅವರ ಮೇಲೆ ಪ್ರಭಾವ ಬೀರಿದ ಗಾಂಧೀ, ಲೋಹಿಯಾ ವಿಚಾರಧಾರೆಗಳು ಅವರ ಸಾಹಿತ್ಯದ ಮೇಲೆ ಬೀರಿದ ಪ್ರಭಾವವನ್ನೂ ವ್ಯಕ್ತವಾಗಿರುವ ವಿಧಾನವನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಆ ಎಲ್ಲಾ ಅಂಶಗಳು ಕಾದಂಬರಿಯಲ್ಲಿ ಬಂಡಾಯದ ಗುಣಗಳಾಗಿ ವ್ಯಕ್ತವಾಗಿದ್ದು ಅದರ ಸ್ವರೂಪವನ್ನು ಅಧ್ಯಯನ ಮಾಡಲಾಗಿದೆ. ಕಾದಂಬರಿಯ ಸಮಾಜದಲ್ಲಿ ಇವುಗಳ ಮೂಲಕ ಬಂಡಾಯದ ವಿವಿಧ ಹಂತಗಳನ್ನು ಗುರುತಿಸಲಾಗಿದೆ.

ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಅಂಶಗಳಿದ್ದು ಅವು ವ್ಯಕ್ತಪಡಿಸುವ ಸಾಮಾಜಿಕ ನಿಲುವುಗಳೇನು? ಎಂಬುದನ್ನು ಸ್ಥೂಲವಾಗಿ ಗಮನಿಸಲಾಗಿದೆ. ಹಾಗೆಯೇ ಈ ಹಿಂದಿನ ಬಂಡಾಯದ ಮಾನದಂಡಗಳಿಂದ ಇವರ ಕಾದಂಬರಿಯನ್ನು ಅಳೆಯುವುದು ಎಷ್ಟು ಸೂಕ್ತ ಎಂಬುದನ್ನು ಈ ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಬಂಡಾಯ ಸಾಹಿತ್ಯದ ಚಲನಶೀಲತೆಗೆ ಅನಂತಮೂರ್ತಿಯವರ ಕೊಡುಗೆ

ಏನು? ಎಂಬುದನ್ನು ಇಲ್ಲಿ ಗುರುತಿಸಲಾಗಿದೆ. ಈ ಕಾದಂಬರಿಗಳು ಯಾವ ರೀತಿಯ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸುತ್ತವೆ? ಎಂಬುದು ಇಲ್ಲಿ ಗಮನಿಸಲಾಗಿದೆ. ಒಟ್ಟಾರೆಯಾಗಿ ಇವರ ಐದು ಕಾದಂಬರಿಗಳಲ್ಲಿರುವ ಬಂಡಾಯದ ವಿವಿಧ ಮುಖಗಳನ್ನು ಇಲ್ಲಿ ಗಮನಿಸಲಾಗಿದೆ. ಈ ಹಿಂದಿನ ಬಂಡಾಯದ ಸ್ವರೂಪಗಳಿಗೂ ಅನಂತ ಮೂರ್ತಿಯವರ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಬಂಡಾಯದ ಸ್ವರೂಪಗಳಿಗೂ ಅರ್ಥಪೂರ್ಣವಾದ ಸಂಬಂಧವನ್ನು ಹುಡುಕಲು ಪ್ರಯತ್ನಿಸಲಾಗಿದೆ.

## ಬಂಡಾಯದ ಪರಿಕಲ್ಪನೆ ಇತಿಹಾಸ

ಬಂಡಾಯ ಸಾಹಿತ್ಯ ಎಂದರೇನು? ಎಂಬುದಕ್ಕೆ ವಿಶ್ವಕೋಶದ ವಿವರಣೆ ಇಂತಿದೆ.

ಬಂಡಾಯ ಸಾಹಿತ್ಯವೆಂದರೆ ಕನ್ನಡದಲ್ಲಿ ನವ್ಯದ ಅನಂತರ ಕಾಣಿಸಿಕೊಂಡ ಸಾಹಿತ್ಯ ಚಳವಳಿ. ಯಾವುದೆ ಸಾಹಿತ್ಯ ಪರಂಪರೆ ತನ್ನ ಸಾಧ್ಯತೆಗಳನ್ನು ಮುಗಿಸಿಕೊಂಡು ಸ್ಥಗಿತವಾಗುವ ಸಮಯಕ್ಕೆ ಮತ್ತೊಂದು ಸಾಹಿತ್ಯ ಪರಂಪರೆ ಹುಟ್ಟಿಗೊಳ್ಳುವುದಕ್ಕೆ ಬೇಕಾಗಿರುವ ಆಶಯಗಳನ್ನು ತನ್ನ ಗರ್ಭದಲ್ಲಿಯೇ ಅಳವಡಿಸಿಕೊಂಡಿರುತ್ತದೆ. ಬಹಳ ಮುಖ್ಯವಾದ ಈ ಆಶಯದ ಜೊತೆಗೆ ಬೇರೆ ದೇಶದ ಬೇರೆ ಕಾಲದ ಬೇರೆ ಶಿಸ್ತಿನ ಹಲವು ಸಂಗತಿಗಳು ನೂತನ ಸಾಹಿತ್ಯದ ಶ್ರೇಷ್ಠತೆಯನ್ನು ಗುರುತಿಸಲು ಬೇಕಾಗುವ ಸೃಜನಶೀಲತೆಯ ನೆಲೆಯನ್ನು ಅರ್ಥಮಾಡಿಸುವುದಕ್ಕೆ ಭದ್ರವಾದ ನೆಲೆಗಟ್ಟನ್ನು ಒದಗಿಸುತ್ತದೆ.

ಪ್ರಗತಿಶೀಲದ ಮುಂದುವರಿಕೆಯಾಗಿ ಕಂಡ ಈ ಸಾಹಿತ್ಯವನ್ನು 'ನವ್ಯೋತ್ತರ ಸಾಹಿತ್ಯ'ವೆಂದೂ ಕರೆಯುವುದುಂಟು. ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಕೇಳಿಬಂದ ಈ ಸಾಹಿತ್ಯ ಎಲ್ಲ ಪ್ರಗತಿಪರ ಲೇಖಕರು, ಹಾಗೂ ದಲಿತ ಬರಹಗಾರರಿಂದ ಸೃಷ್ಠಿಯಾಯಿತು.

ಎಲ್ಲ ಜಾತಿ, ವರ್ಗಗಳಿಂದ ಬಂದ ಬರಹಗಾರರಿಂದ ಶೋಷಿತರ ಪರವಾಗಿ ರಚಿತವಾದದ್ದು ಬಂಡಾಯ ಸಾಹಿತ್ಯವೆನಿಸಿದೆ. ಬಂಡಾಯ ಚಳವಳಿ ಎಲ್ಲಾ ಎಡಪಂಥೀಯ ಧೋರಣೆಯುಳ್ಳವರು ಮತ್ತು ಪ್ರಜಾಪ್ರಭುತ್ವ ಶಕ್ತಿಗಳು ಸೇರಿ ಒಳಗೊಂಡದ್ದು. 'ಪ್ರಗತಿಗಾಮಿ ದಲಿತಸಾಹಿತಿಗಳೆಲ್ಲ ಬಂಡಾಯ ಸಾಹಿತಿಗಳು, ಬಂಡಾಯಸಾಹಿತಿಗಗಳೆಲ್ಲರೂ ದಲಿತ ಸಾಹಿತಿಗಳಲ್ಲ' ಎಂಬ ಬರಗೂರು ರಾಮಚಂದ್ರಪ್ಪ ಅವರ ಅಭಿಪ್ರಾಯಗಳನ್ನು ಗಮನಿಸಬೇಕು. ಒಟ್ಟಾರೆ ದಲಿತ ಸಾಹಿತ್ಯವನ್ನು ಒಳಗೊಂಡದ್ದು ಬಂಡಾಯ ಸಾಹಿತ್ಯ ಎಂಬ ತೀರ್ಮಾನಕ್ಕೆ ಬರಲಾಯಿತು. ಸಾಹಿತ್ಯಸೃಷ್ಠಿ ಇವರಿಗೆ ಕೇವಲ ಸಂತೋಷಕ್ಕಾಗಿ ಕಾಣದೆ ಸಾಂಸ್ಕೃತಿಕ ಬದಲಾವಣೆಗಾಗಿ ಎನಿಸಿತು.

ಸಂಸ್ಕೃತಿಯ ಮೌಲ್ಯಗಳು ಸ್ಥಗಿತಗೊಂಡಾಗ, ಪ್ರತಿಗಾಮಿಯಾದಾಗ ಅಂಥವುಗಳ ವಿರುದ್ಧ

ಹೋರಾಡುವುದು ಬಂಡಾಯ. ಇದೆ ಸಾಹಿತ್ಯದಲ್ಲಿ ನಿರೂಪಿತಗೊಂಡಾಗ ಬಂಡಾಯ ಸಾಹಿತ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸಂಘಟಿತವಾದದ್ದು ಬಂಡಾಯ ಸಾಹಿತ್ಯ ಚಳವಳಿ. ಯಜಮಾನ ಸಂಸ್ಕೃತಿಯನ್ನು ವಿರೋಧಿಸುವುದು, ತುಳಿತಕ್ಕೊಳಗಾದವರ ಪರವಾಗಿ ಸಾಹಿತ್ಯ ರಚಿಸುವುದಕ್ಕಾಗಿ 'ಖಡ್ಗವಾಗಲಿ ಕಾವ್ಯ' ಎಂದದ್ದು, ಪ್ರಜಾಪ್ರಭುತ್ವದ ರಕ್ಷಣೆ ಮತ್ತು ವಿಸ್ತರಣೆಯ ಜವಾಬ್ದಾರಿ ಹೊತ್ತದ್ದು -ಇತ್ಯಾದಿ ಅಂಶಗಳು ಸಮಾವೇಶಗೊಂಡ ದಿನ ಮುಖ್ಯವಾಗಿ ಕೇಳಿಬಂದವು. ಜೊತೆಗೆ ಬಂಡಾಯ ಸಾಹಿತ್ಯದ ಮುಖ್ಯ ಜವಾಬ್ದಾರಿಯ ಬಗೆಗೂ ಅಭಿಪ್ರಾಯ ಮೂಡಿದವು. ಬಂಡಾಯ ಸಾಹಿತ್ಯ ಸೌಂದರ್ಯದ ಆರಾಧನೆಯಲ್ಲಿ ತೊಡಗುವುದಿಲ್ಲ. ಕೇವಲ ಬೌದ್ಧಿಕ ತುಡಿತವೂ ಅದರ ಉದ್ದೇಶವಾಗಿಲ್ಲ. ಸಾಮಾಜಿಕ ಹೊಣೆಗಾರಿಕೆ ಅದರ ಮುಖ್ಯಗುರಿ. ಜಾತಿ ವರ್ಗಗಳಂಥ ಅಸಮಾನತೆ, ಅನ್ಯಾಯಗಳ ವಿರುದ್ಧ ಶ್ರಮಜೀವಿಗಳನ್ನು ಕ್ರಾಂತಿಗೆ, ಹೋರಾಟಕ್ಕೆ ಸಿದ್ಧಗೊಳಿಸುವುದು ಬಂಡಾಯ ಸಾಹಿತ್ಯದ ಜವಾಬ್ದಾರಿಯಾಗಿದೆ. ಹಾಗಾಗಿ ಈ ಸಾಹಿತ್ಯ ಪರಂಪರೆಯ ವಿರೋಧಿಯಲ್ಲ, ಸಂಪ್ರದಾಯದೊಳಗಿನ ಜಡತ್ವವನ್ನು ವಿರೋಧಿಸುತ್ತದೆ, ಅಮಾನವೀಯತೆಯನ್ನು ಬಗ್ಗು ಬಡಿಯುತ್ತದೆ. ಪ್ರತಿಗಾಮಿತ್ವವನ್ನು ಪ್ರತಿಭಟಿಸುತ್ತಲೇ ಪರಂಪರೆಯೊಂದಿಗೆ ಸಂಬಂಧವನ್ನು ಇಟ್ಟುಕೊಂಡಿದೆ.

ಸಾಹಿತ್ಯಿಕ ಪ್ರೇರಣೆಗಳ ಜೊತೆಗೆ ಸಾಹಿತ್ಯೇತರ ಪ್ರೇರಣೆಗಳೂ ಕೆಲಸ ಮಾಡಿದವು. ಮುಖ್ಯವಾಗಿ ಎಡಪಂಥೀಯ ಸಿದ್ಧಾಂತಗಳೆಲ್ಲ ಬಂಡಾಯ ಸಾಹಿತ್ಯದ ಮೇಲೆ ಪ್ರಭಾವ ಬೀರಿವೆ. ಇದರ ಮೂಲಕವಾಗಿ ಈ ಪಂಥದ ಲೇಖಕರ ಸೃಜನಶೀಲ ಚಟುವಟಿಕೆಗಳಿಗೆ ಬೆಂಬಲ ಒದಗಿತು. ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್, ಕಿಷನ್ ಪಟ್ನಾಯಕ್, ರಾಮಸ್ವಾಮಿನಾಯರ್, ಜಯಪ್ರಕಾಶ ನಾರಾಯಣ್ -ಇವರೆಲ್ಲರ ಸಿದ್ಧಾಂತಗಳ ಪ್ರಭಾವ ಈ ಸಾಹಿತ್ಯದ ಮೇಲಾಯಿತು.

ಹೊಸ ಶತಮಾನಕ್ಕೆ ಕಾಲಿಟ್ಟಿರುವ ಸಂದರ್ಭದಲ್ಲಿ ಬಂಡಾಯ ಸಾಹಿತ್ಯ ಹೊಸ ಸವಾಲುಗಳನ್ನು ಎದುರಿಸಬೇಕಾಗಿದೆ. ಹಿಂದಿಗಿಂತ ಭಿನ್ನವಾದ ಹೊಸ ಸಮಸ್ಯೆಗಳು ಮುಂದಿವೆ. ಜಾಗತೀಕರಣ-ಉದಾರೀಕರಣಗಳ ಹೆಸರಿನಲ್ಲಿ ಹೇರುತ್ತಿರುವ ಮೌಲ್ಯಗಳು ಮೂಕ ಸಂಸ್ಕೃತಿಯ ಸಮುದಾಯದ ಸಂಕಟವನ್ನು ಸಾವಿರಪಟ್ಟು ಹೆಚ್ಚಿಸುತ್ತಿವೆ. ಪ್ರಗತಿಪರರು ಪ್ರತಿಪಾದಿಸಿಕೊಂಡು ಬಂದ ಸಮಾಜ ಬದಲಾವಣೆಯ ಚಿಂತನಾಕ್ರಮ ಮತ್ತು ಕ್ರಿಯೆಗಳು ಬಿಕ್ಕಟ್ಟಿಗೆ ಒಳಗಾಗಿವೆ. ಜಾಗತೀಕರಣ ಮತ್ತು ಸ್ವದೇಶೀಕರಣದಲ್ಲಿರುವ ಜನ ವಿರೋಧಿ ನೆಲೆಗಳು ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಕ್ಕೆ ಹೊಸ ಸವಾಲುಗಳನ್ನು ಒಡ್ಡುತ್ತಿರುವ ಇಂದಿನ ಸನ್ನಿವೇಶದಲ್ಲಿ ಬಂಡಾಯ ಸಾಹಿತ್ಯ ಆತ್ಮಾವಲೋಕನದೊಂದಿಗೆ ಪುನಶ್ಚೇತನಗೊಳ್ಳುತ್ತಿದೆ. ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ದಲಿತ ಸಂವೇದನೆ, ಮುಸ್ಲಿಂ ಸಂವೇದನೆ, ಸ್ತ್ರೀಸಂವೇದನೆ, ಗ್ರಾಮೀಣ ಸಂವೇದನೆ-ಇತ್ಯಾದಿ ಹಲವಾರು ಅನುಭವಗಳು ಸಂವೇದನೆಗಳು ಅಭಿವ್ಯಕ್ತಿಗೊಳ್ಳಲು ಬಂಡಾಯ ಸಾಹಿತ್ಯ ಚಳವಳಿ ಕಾರಣವಾಯಿತು.

ನಿರ್ಲಕ್ಷಿತ ಶ್ರಮ ಸಂಸ್ಕೃತಿಯ ಸೂಕ್ಷ್ಮಗಳು ಬಂಡಾಯ ಕಾವ್ಯದ ಅಂತಸ್ಸತ್ವವಾದದ್ದಲ್ಲದೆ ಕನ್ನಡ ಕಾವ್ಯಕ್ಕೆ ಹೊಸ ಆಯಾಮ ಒದಗಿದಂತಾಯಿತು. ಹೊಸಭಾಷೆ ಲಯಗಾರಿಕೆಗಳು ರೂಪುಗೊಂಡವು. ಅದರ

ಮುಖೇನ ಹೊಸ ವಿನ್ಯಾಸದ ಹುಡುಕಾಟ ತೀವ್ರವಾಯಿತು. 'ಬಂಡಾಯ ಕಾವ್ಯವೆಂದರೆ ಪುನರವಲೋಕನ ಪ್ರಕ್ರಿಯೆ ಮತ್ತು ಸಮಕಾಲೀನ ಸ್ಫೋಟ ಎರಡನ್ನೂ ಒಳಗೊಂಡು ಉರಿಯುವ ಕೆಂಡ'ವೆನಿಸಿತು. ಪುರಾಣ, ಚರಿತ್ರೆ ಮತ್ತು ಸಮಕಾಲೀನ ಸಂಗತಿಗಳನ್ನು ತನ್ನ ಗ್ರಹಿಕೆಯ ಹೊಸ ಒಳನೋಟಗಳಲ್ಲಿ ಪರಿಶೀಲಿಸತೊಡಗಿತು. ತಾವು ಬರೆಯುವ ಕಾವ್ಯದ ಸ್ವರೂಪ, ಪುರಣೇತಿಹಾಸಗಳನ್ನು ಹೊಸನೆಲೆಯಿಂದ ಪರಿಭಾವಿಸುವ ರೀತಿ, ಹೋರಾಟ ಜೀವಿಗಳ ವ್ಯಕ್ತಿತ್ವ, ಪ್ರಕೃತಿಚಿತ್ರ, ವಿವಿಧ ಜಾತಿ ಜನವರ್ಗಗಳ ಜೀವನವಿಧಾನ, ಪ್ರಾದೇಶಿಕತೆ, ದುರಂತ - ಇತ್ಯಾದಿಗಳ ವೈವಿಧ್ಯತೆ ಬಂಡಾಯ ಕಾವ್ಯದಲ್ಲಿ ಕಂಗೊಳಿಸಿತು.

ಬಂಡಾಯ ಸಾಹಿತ್ಯ ವಿಮಶೆಗೆ ತಮ್ಮದೆ ಆದ ವಿಶಿಷ್ಟ ಮಾನದಂಡಗಳಿವೆ ಎಂಬುದನ್ನು ಬರಗೂರು ರಾಮಚಂದ್ರಪ್ಪ ಅವರು ಬಂಡಾಯ ಸಾಹಿತ್ಯ ಮೀಮಾಂಸೆಯಲ್ಲಿ (೧೯೯೧) ಪ್ರಪ್ರಥಮ ಬಾರಿಗೆ ಚರ್ಚಿಸಿ ಬಂಡಾಯ ಸಾಹಿತ್ಯ ವಿಮರ್ಶೆಗೆ ಅಡಿಪಾಯ ಹಾಕಿದರು.

ಬಸವರಾಜ ಸಬರದ ಹೇಳುವಂತೆ 'ತುರ್ತು ಪರಿಸ್ಥಿತಿಯ ಕರಾಳಛಾಯೆ' ಕಳೆದು ೨೩ ವರ್ಷಗಳಾಗುತ್ತ ಬಂದವು. ಅದೇ ಸಂದರ್ಭದಲ್ಲಿ ಮೊಳಕೆಯೊಡೆದ ಬಂಡಾಯದ ಬೀಜ, ನಂತರದ ಮೂರು ವರ್ಷಗಳಲ್ಲಿ ಅಂದರೆ ೧೯೭೯ ರಲ್ಲಿ ನಡೆದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಸಸಿಯಾಗಿ ಕಾಣಿಸಿಕೊಂಡಿತು. ಅಂದರೆ ಬಂಡಾಯ ಚಳವಳಿಗೆ ಈಗ ಬೆಳ್ಳಿಹಬ್ಬ ಆಚರಿಸುವ ದಿನಗಳು ಸಮೀಪಿಸಿವೆ. ಈ ಎರಡೂವರೆ ದಶಕಗಳ ಅವಧಿಯಲ್ಲಿ ಬಂಡಾಯ ಚಳವಳಿಯ ಒಳಗಡೆಯಿದ್ದ ಲೇಖಕರು ಬಂಡಾಯದ ವಕ್ತಾರರಂತೆ ಮಾತನಾಡಿದ್ದಾರೆ. ಈಗ ಬಂಡಾಯ ಸಸಿಯಲ್ಲ. ಎರಡೂವರೆ ದಶಕಗಳಲ್ಲಿ ಮರವಾಗಿ ಬೆಳೆದುನಿಂತಿದೆ. ಈ ಸಂದರ್ಭದಲ್ಲಿ ನಾವು ಸಂಘಟನೆ, ಸಾಹಿತ್ಯ ಕುರಿತಂತೆ ನಿಷ್ಠುರವಾಗಿ ಮಾತನಾಡದಿದ್ದರೆ, ಆತ್ಮವಿಮರ್ಶೆ ಮಾಡಿಕೊಳ್ಳದಿದ್ದರೆ, ಕಾಲದ ದವಡೆಯಲ್ಲಿ ಕಳೆದುಹೋಗುತ್ತೇವೆ. ಬಂಡಾಯ ಸಂಘಟನೆಯ ಹಾಗೂ ಅದರಿಂದ ಉತ್ಪತ್ತಿಯಾದ ಸಾಹಿತ್ಯದ ಸೋಲು ಗೆಲುವುಗಳನ್ನು ಗಮನಿಸದಿದ್ದರೆ, ವಿಮರ್ಶೆಗೊಳಪಡಿಸದಿದ್ದರೆ ಆತ್ಮವಂಚನೆ ಮಾಡಿಕೊಂಡಂತಾಗುತ್ತದೆ. ಆದುದರಿಂದ ಈಗ ಆತ್ಮವಿಮರ್ಶೆಯ ಜತೆಗೆ ಸಾಹಿತ್ಯ-ಸಂಘಟನೆಗಳ ವಿಮರ್ಶೆಯನ್ನೂ ಮಾಡಬೇಕಾಗಿದೆ.[1]

ವಿಶ್ವಕೋಶದ ಈ ವಿವರಣೆಯನ್ನು ಗಮನಿಸುತ್ತಾ ಬಂಡಾಯ ಎಂದರೇನು? ಎಂಬ ಪ್ರಶ್ನೆಯ ಜೊತೆಜೊತೆಗೆ ಸಾಹಿತ್ಯದಲ್ಲಿ ಬಂಡಾಯ ಎಂದರೇನು? ಎಂಬ ಪ್ರಶ್ನೆಯೂ ಬರುತ್ತದೆ.

"ಉತ್ತಮ ಸಮಾಜವನ್ನು ರೂಪಿಸುವ ಸಲುವಾಗಿ ಸಾಮಾಜಿಕನೊಬ್ಬನ ನೋವು ನಲಿವುಗಳನ್ನು ಸಾಮಾನ್ಯೀಕರಿಸಿ ಹೂಡುವ ಸಮಾಜಮುಖಿಯಾದ ಚಿಂತನೆ ಹಾಗೂ ಪ್ರಕ್ರಿಯೆಗಳನ್ನು 'ಬಂಡಾಯ' ಎನ್ನಬಹುದು." ಇಂತಹ ಆಶಯಗಳನ್ನು ಧ್ವನಿಸುವ ಸಾಹಿತ್ಯವನ್ನು 'ಬಂಡಾಯ ಸಾಹಿತ್ಯ' ಎಂದು ಗುರುತಿಸಬಹುದು.

ಸಮಾಜದಂತೆಯೇ ಸಾಹಿತ್ಯದಲ್ಲಿಯೂ ಬಂಡಾಯವು ನಿರಂತರವಾಗಿ ನಡೆದುಕೊಂಡು ಬಂದಿದೆ. ಆದರೆ ಸಾಹಿತ್ಯದಲ್ಲಿನ ಬಂಡಾಯವು ದ್ವಿಮುಖವಾಗಿ ಹೊರಹೊಮ್ಮುತ್ತದೆ. ಮೊದಲನೆಯದಾಗಿ ಸಮಾಜದೊಳಗಿನ ಆಗುಹೋಗುಗಳ ಕಾರಣದಿಂದಾಗಿ ಪ್ರಚೋದನೆಯನ್ನು ಹೊಂದಿ ಸೃಷ್ಟಿಯಾಗುವ ಸಾಹಿತ್ಯದಲ್ಲಿ ಸಮಾಜದಂತೆಯೇ ಬಂಡಾಯದ ಅಂಶಗಳು ಕಂಡು ಬರುತ್ತದೆ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ಹನ್ನೆರಡನೆಯ ಶತಮಾನದಲ್ಲಿ ಕಂಡುಬಂದ ಸಾಮಾಜಿಕ ಕ್ರಾಂತಿ ಹಾಗೂ ಅದರ ಕಾರಣದಿಂದಾಗಿ ಉಗಮವಾದ ವಚನ ಸಾಹಿತ್ಯ ಚಳವಳಿಯನ್ನು ಗುರುತಿಸಬಹುದು. ಇದಕ್ಕೂ ಹಿಂದಿನಿಂದಲೂ ಕನ್ನಡ ಸಾಹಿತ್ಯದಲ್ಲಿ ವಸ್ತುವಿನಲ್ಲಿ, ಶೈಲಿಯಲ್ಲಿ, ಭಾಷೆಯಲ್ಲಿ ಹಲವು ಬದಲಾವಣೆಯನ್ನು ಹೊಂದಿದೆ. ಆ ಮಟ್ಟದ ಬಂಡಾಯವನ್ನು ಮಾತ್ರ ಗುರುತಿಸಬಹುದು. ಹಾಗೆಯೆ ಕಳೆದ ಶತಮಾನದಲ್ಲಿ ಪ್ರಖರಾವಸ್ಥೆಯಲ್ಲಿದ್ದ 'ಬಂಡಾಯ ಸಾಹಿತ್ಯ ಚಳವಳಿ'ಯನ್ನು ಈ ನಿಟ್ಟಿನಲ್ಲಿ ಗಮನಿಸಬಹುದು.

ಎರಡನೆಯದಾಗಿ ಸಾಹಿತ್ಯ ವಲಯದೊಳಗೆ ಹುಟ್ಟಿಕೊಳ್ಳುವ ಹೊಸ ಆಲೋಚನೆಗಳು ಹೊಸ ಸಿದ್ಧಾಂತಗಳು ಹೊಸರೀತಿಯ ಸಾಹಿತ್ಯ ರಚನೆಗೆ ದಾರಿಮಾಡಿಕೊಡುತ್ತದೆ. ಉದಾಹರಣೆಗೆ ನಮ್ಮ ಎಲ್ಲ ಜ್ಞಾನಶಾಖೆಗಳೂ ಕಂಠಸ್ಥವಾಗಿರುತ್ತಿದ್ದ ಕಾಲದಲ್ಲಿ ಛಂದಸ್ಸಿನ ನಿಯಮಾನುಸಾರ ಕಾವ್ಯರಚನೆಯನ್ನು ಕೈಗೊಳ್ಳಲಾಗುತ್ತಿತ್ತು. ಇದರಿಂದಾಗಿ ಯಾವುದೇ ವಿಷಯವನ್ನು ನೆನಪಿನಲ್ಲಿ ಉಳಿಸಿಕೊಳ್ಳುವುದು ಸುಲಭವಾಗಿತ್ತು. ಕಾಲ ಸರಿದಂತೆ ಎಲ್ಲವನ್ನು ಕಂಠಸ್ಥವಾಗಿ ರೂಢಿಸಿಕೊಳ್ಳುವ ಅನಿವಾರ್ಯ ಕಡಿಮೆಯಾಗುತ್ತಾ ಹೋಯಿತು. ಜೊತೆಗೆ ಸಾಹಿತ್ಯ ರಚನೆ ಕೆಲವೇ ಕೆಲವು ಮಂದಿಯ ಹಿಡಿತದಿಂದ ತಪ್ಪಿಸಿಕೊಂಡು ಸಮಾಜದ ಎಲ್ಲ ವರ್ಗಗಳಿಗೂ ತಲುಪುತ್ತಿದ್ದ ಸಂದರ್ಭದಲ್ಲಿ ಅವುಗಳನ್ನು ಸರಳ ಭಾಷೆಯಲ್ಲಿ ರಚಿಸಲಾಯಿತು. ಉದಾಹರಣೆಗೆ ಪಂಪನ ಆದಿಪುರಾಣ, ರನ್ನನ ಅಜಿತ ಪುರಾಣ, ಪೊನ್ನನ ಶಾಂತಿಪುರಾಣಗಳು ಧಾರ್ಮಿಕ ಕಾವ್ಯಗಳೆನಿಸಿಕೊಂಡು ಅಂದಿನ ಸಾಹಿತ್ಯ ಕ್ಷೇತ್ರದಲ್ಲಿಯೂ ಸಮಾಜದಲ್ಲಿಯೂ ಪ್ರಾಮುಖ್ಯತೆಯನ್ನು ಪಡೆದಿದ್ದವು. ಆ ನಂತರ ದುರ್ಗಸಿಂಹನ ಪಂಚತಂತ್ರ, ೨ನೇ ನಾಗವರ್ಮನ ಭಾಷಾಭೂಷಣ, ಕಾವ್ಯಾವಲೋಕನ ಇವು ಶಾಸ್ತ್ರಗ್ರಂಥಗಳಾದರೆ, ರಾಘವಾಂಕನ ಸಿದ್ಧರಾಮ ಪುರಾಣ ಮುಂತಾದ ಕಾವ್ಯಗಳು ಸಾಂಸ್ಕೃತಿಕ ನಾಯಕರನ್ನು ಕೇಂದ್ರವಾಗಿಟ್ಟುಕೊಂಡಿದೆ. ಕಾಲಕ್ರಮೇಣ ೨೦ನೇ ಶತಮಾನದ ಬಹುತೇಕ ಕಾದಂಬರಿಗಳು ಜನಸಾಮಾನ್ಯರನ್ನೇ ಕೇಂದ್ರವಾಗಿಟ್ಟುಕೊಂಡು ರಚನೆಯಾಗಿದೆ. ಇವುಗಳಲ್ಲಿ ವಸ್ತುವಿಗೆ ತಕ್ಕ ಭಾಷೆ ಬಳಕೆಯಾಗಿರುವುದನ್ನು ಕಾಣಬಹುದು. ಉದಾಹರಣೆಗೆ ಸಂಸ್ಕೃತದಿಂದ ಕನ್ನಡಕ್ಕೆ ಬಂದ ಕೃತಿಗಳು. ಉದಾಹರಣೆಗೆ ಪೂರ್ವ ಪುರಾಣದಿಂದ ಆದಿಪುರಾಣ, ವ್ಯಾಸಭಾರತದಿಂದ ವಿಕ್ರಮಾರ್ಜುನ ವಿಜಯ ಪ್ರಾರಂಭಿಸಿದಾಗ ಅದರ ಲಯ, ವಿನ್ಯಾಸದಲ್ಲೂ, ವಸ್ತು, ವಿಚಾರಗಳಲ್ಲೂ ತಮ್ಮ ನಿಲುವುಗಳನ್ನು ಬದಲಾಯಿಸಿಕೊಂಡಿದ್ದರು.

ಹೀಗೆ ಕಾಲಾನುಕಾಲಕ್ಕೆ ಸಮಾಜದಲ್ಲಿಯೂ, ಸಮಾಜದಿಂದ ಪ್ರಭಾವಿತವಾದ ಸಾಹಿತಯದಲ್ಲಿಯೂ, ಸಾಹಿತ್ಯ ರಚಿಸುವ ವಿಧಾನದಲ್ಲಿಯೂ ಆಗುತ್ತಿರುವ ಜನಪರವಾದ ನಿಲುನ್ನು ಹೊಂದಿದ ಬದಲಾವಣೆಯನ್ನು ಬಂಡಾಯವೆಂದು ಗುರುತಿಸಬಹುದು.

ಸಾಹಿತ್ಯದಲ್ಲಿ ಈ ಬದಲಾವಣೆಗೆ ಪ್ರಮುಖ ಕಾರಣವೆಂದರೆ, ಕ್ರಿಯಾಶೀಲವಾದ ಮಾನವನ ಹೊಸಹೊಸ ಚಿಂತನೆಗಳಿಗೆ ಹಳೆಯ ಸಿದ್ಧಾಂತಗಳಾಗಲೀ, ಛಂದಸ್ಸುಗಳಾಗಲೀ, ವಿಚಾರಗಳಾಗಲೀ ಸಾಕಷ್ಟು ಸ್ಪಂದಿಸದೇ ಇದ್ದುದರಿಂದ ಹೊಸ ಮೌಲ್ಯಗಳ ಹುಡುಕಾಟ ಪ್ರಾರಂಭವಾಗಿ ಸಾಹಿತ್ಯದ ರೂಪ ಮತ್ತು ಗುಣಗಳೆರಡರಲ್ಲಿಯೂ ಬದಲಾವಣೆ ಆಯಿತೆಂದು ಹೇಳಬಹುದು.

ಇದರ ಪರಿಣಾಮದಿಂದಾಗಿ ಧಾರ್ಮಿಕ ಕಾವ್ಯಗಳು ರಚನೆಯಾಗುತ್ತಿದ್ದ ಸಂದರ್ಭದಲ್ಲಿ ಸಾಂಸ್ಕೃತಿಕ ನಾಯಕನೊಬ್ಬನ ಜೀವನ ಚಿತ್ರಣವೂ ಕಾವ್ಯವಾಗುತ್ತಿತ್ತು. ಮತ್ತು ಅದು ಹೆಚ್ಚು ಪ್ರಚಲಿತವಾದಂತೆಲ್ಲಾ ಅದರ ಜೊತೆಜೊತೆಗೆ ಸಾಮಾನ್ಯರ ಬದುಕೂ ಸಾಹಿತ್ಯದಲ್ಲಿ ಕಾಣಿಸಿಕೊಂಡಿತು. ಹಾಗೆಯೇ ಕೃತಿಯಲ್ಲಿನ ವಸ್ತುವಿಗೆ ಹೊಂದುವ ರೀತಿಯಲ್ಲಿ ಅದರ ಶೈಲಿಯಲ್ಲಿ ಬದಲಾವಣೆಯಾಯಿತು.

ಹೀಗೆ ಕಾಲನಿಷ್ಠವಾದ ಸದಾ ವರ್ತಮಾನವಾಗಿರುವ ಬಂಡಾಯ ಎಂಬ ಈ ಸಾಂಸ್ಕೃತಿಕ ದಾರಿಯಲ್ಲಿ ನಾವೆಲ್ಲಿದ್ದೇವೆ ಎಂಬುದನ್ನು ತಿಳಿಯುವ ಸಲುವಾಗಿ ಹಲವು ಕೃತಿಗಳನ್ನು ಗಮನಿಸಲಾಗುತ್ತದೆ

ಇಡಿಯಾಗಿ ಕನ್ನಡ ಸಾಹಿತ್ಯದ ಬಂಡಾಯದ ಎಲ್ಲ ಅಂಶಗಳನ್ನು ಒಂದೇ ಒಂದು ಅಧ್ಯಯನದಲ್ಲಿ ಗುರುತಿಸಿಡುವುದು ಸಾಧ್ಯವಿಲ್ಲದಿದ್ದರೂ ಈವರೆಗೆ ಗುರುತಿಸಲಾಗಿರುವ ಹಳೆಗನ್ನಡ ಸಾಹಿತ್ಯದ ಹಲವು ಬಂಡಾಯದ ದನಿಯನ್ನು ಸಂಗ್ರಹಿಸಲಾಗಿದೆ. ಹಾಗೆಯೇ ಇತರ ಸಾಹಿತ್ಯದಲ್ಲಿ ನಮ್ಮ ಅಧ್ಯಯನದ ಪರಿಮಿತಿಯಲ್ಲಿ ಗಮನಾರ್ಹವೆನಿಸಿದ ಬಂಡಾಯದ ಅಂಶಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ಜನಪದ ಸಾಹಿತ್ಯದಲ್ಲಿ ಕಂಡುಬರುವ ಬಂಡಾಯದ ಧ್ವನಿಯನ್ನು ಗುರುತಿಸಲು ಯತ್ನಿಸಲಾಗಿದೆ.

ಚರಿತ್ರೆಯ ಗತಿಯಲ್ಲಿ ಬೆಳೆಯದ ಸಾಹಿತಿ ವಿಫಲನಾಗುತ್ತಾನೆ. ಎಂದರೆ ತನ್ನ ಜೀವಿತಾವಧಿಯಲ್ಲಿ ಸಮಾಜವನ್ನು ಕಂಡು, ಅನುಭವಿಸಿದ ಸಂಗತಿಗಳನ್ನು ಕಾವ್ಯದ ಒಳದನಿಯಾಗಿ ಮಾರ್ಪಡಿಸಿಕೊಳ್ಳಲಾರದೆ ಹೋದಲ್ಲಿ ಆ ಕಾವ್ಯವು ಸಾಂಸ್ಕೃತಿಕ ಸಂದರ್ಭವನ್ನು ಮೈಗೂಡಿಸಿಕೊಳ್ಳದೇ ಹೋದಲ್ಲಿ ಅದರ ಅಸ್ತಿತ್ವಕ್ಕೇ ಪೆಟ್ಟು ಬೀಳುತ್ತದೆ. ಚಾರಿತ್ರಿಕ ಹಾಗೂ ರಾಜಕೀಯ ಬದಲಾವಣೆಯ ಕಾರಣದಿಂದಾಗಿ ಸ್ಥಿತ್ಯಂತರಗೊಳ್ಳುವ ಸಮಾಜದಲ್ಲಿ ಜನಸಾಮಾನ್ಯರು ಎದುರಿಸುವ ಸಂಕಷ್ಟಗಳ ನಿವಾರಣೆಗಾಗಿ ಪ್ರಭುತ್ವದ ವಿರುದ್ಧವಾಗಿ ಹೊರಟ ದನಿ ಮೊದಲಿನಿಂದಲೂ ಸಾಹಿತ್ಯದಲ್ಲಿ ಇದ್ದೇ ಇದೆ. ಆದರೆ ಅದು 'ಬಂಡಾಯ' ಎಂಬ ಹೆಸರನ್ನು ಇಟ್ಟುಕೊಳ್ಳದೆ ಅದೇ ಮನೋಧರ್ಮವನ್ನು ಪ್ರಕಟಿಸುತ್ತಾ ಬಂದ ಸೃಜನಶೀಲ ಕ್ರಿಯೆ.

ಕನ್ನಡದ ಕವಿಗಳು 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿ'ಗಳಾಗಿರುವಂತೆಯೇ ಸಾಮಾಜಿಕ ಸಮಾನತೆಗಳಿಗಾಗಿ ತಮ್ಮ ದನಿಗೂಡಿಸಿದ್ದಾರೆ. ಅನಾದಿ ಕಾಲದಿಂದಲೂ ಬಲಿಷ್ಠ ಗುಂಪುಗಳು ಬಲಹೀನ ಗುಂಪುಗಳೊಡನೆ ನಡೆಸಿದ ಸ್ಪರ್ಧೆಗಳಲ್ಲಿ ಬಲಿಷ್ಠ ಗುಂಪುಗಳು ಸಾಧಾರಣವಾಗಿ ದಬ್ಬಾಳಿಕೆಯನ್ನು ನಡೆಸಿದ

ಕಾರಣದಿಂದಾಗಿ ಬಲಹೀನ ಗುಂಪುಗಳ ಇಡಿಯಾದ ಜೀವನಕ್ರಮದ ಮೇಲೆ ತಮ್ಮ ಪ್ರಭಾವವನ್ನು ಬೀರಿದೆ. ಯಾವುದೆ ಜನಾಂಗವೊಂದು ತನ್ನ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ತನ್ನ ಉಳಿವಿಗಾಗಿ ಪ್ರತಿಭಟಿಸಿರುವುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಇದೇ ಅಂಶವನ್ನು ಸಾಹಿತ್ಯದಲ್ಲಿಯೂ ಕಾಣಬಹುದಾಗಿದೆ. ಅನೇಕ ಪುರಾಣ ಕಥೆಗಳಲ್ಲೂ, ಜನಪದ ಕಥೆಗಳಲ್ಲೂ ಪ್ರತಿಭಟನೆಯ ಅಂಶವಿರುವುದನ್ನು ಕಾಣಬಹುದು. ಸಾಹಿತ್ಯ-ಸಮಾಜ ಎರಡೂ ಅವಿನಾ ಸಂಬಂಧವನ್ನು ಹೊಂದಿವೆ.

'ಪ್ರಸಿದ್ಧ ಪುರಾಣ ಕಥೆಗಳಲ್ಲಿ ಒಂದಾದ 'ದಕ್ಷಯಜ್ಞ' ಕಥೆಯಲ್ಲಿ ಶಿವನು ತನ್ನ ಮಾವನಾದ ದಕ್ಷನನ್ನು ಸಂಹರಿಸುತ್ತಾನೆ.' ಇದಕ್ಕೆ ದಕ್ಷನು ಶಿವನು ತನ್ನಷ್ಟು ಸಿರಿವಂತನಲ್ಲ ಎಂಬ ಅಸಮಾನತೆಯ ಭಾವವೇ ಕಾರಣವಾಗಿದೆ. ಆ ಅಹಂಕಾರ ನಿರ್ಮೂಲನೆಗೆ ಶಿವನು ಪ್ರತಿಭಟಿಸುತ್ತಾನೆ. ಈ ಪ್ರಸಿದ್ಧ ಕಥೆಗೆ ಭಕ್ತಿಯ ಆಯಾಮವಿರುವಂತೆಯೇ ಸಾಮಾಜಿಕ ಆಯಾಮವೂ ಇದೆ. ಇದೇ ರೀತಿ ಹತ್ತು ಹಲವು ಕಥೆಗಳು ನಮಗೆ ದೊರೆಯುತ್ತವೆ. ಉದಾಹರಣೆಗೆ 'ದಶಾವತಾರ'ದ ಕಥೆಗಳನ್ನು ಗಮನಿಸುವುದಾದರೆ ಅಲ್ಲಿಯ ಮುಖ್ಯ ಅಂಶ ದುಷ್ಟರನ್ನು ಶಿಕ್ಷಿಸುವುದು ಹಾಗೂ ಶಿಷ್ಟರನ್ನು ರಕ್ಷಿಸುವುದು. ಹಾಗೂ ಸರ್ವರ ಒಳಿತಿಗಾಗಿ ನಾಯಕನೊಬ್ಬ ಉದಯಿಸುವುದು. ಅತಿರಂಜಿತವಾದ ಅನೇಕಾನೇಕ ಸನ್ನಿವೇಶಗಳು ಈ ಕಥೆಗಳಲ್ಲಿ ಇದ್ದು ಅವುಗಳನ್ನು ಹೊರತುಪಡಿಸಿ ನೋಡಿದರೆ ಅದರಲ್ಲಿ ಬಂಡಾಯದ ಅಂಶವಿರುವುದು ಸ್ಪಷ್ಟವಿದೆ.

ಹಾಗೂ ಈ ಕಥೆಗಳಲ್ಲಿ ಪ್ರತಿನಾಯಕರ ಜನ್ಮಾಂತರದ ವಿಷಯಗಳನ್ನು ಹೊರತುಪಡಿಸಿ ನೋಡಿದರೆ, ಅವರ ಸಂಹಾರವು ಸಮಾಜ ಘಾತುಕರ ವಿರುದ್ಧ ನಡೆಸಿದ ಹೋರಾಟವಾಗಿದೆ. ಕಾಲ ಯಾವುದೇ ಇರಲಿ ಸಮಾನತೆಯನ್ನು ಪ್ರತಿಪಾದಿಸುವುದು ಸಾಹಿತ್ಯದ ಒಂದು ಗುಣವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಆಯಾ ಕಾಲಧರ್ಮದ ಹಿನ್ನೆಲೆಯಲ್ಲಿ ಬಂಡಾಯದ ಸ್ವರೂಪಗಳನ್ನು ಗುರುತಿಸಬಹುದು. ನಮ್ಮ ಸಾಹಿತ್ಯದ ಪ್ರಥಮ ಹಂತದಲ್ಲಿ ಸಾಹಿತ್ಯ ಬಹುತೇಕ ಧರ್ಮದ ಹಿಡಿತದಲ್ಲಿಯೇ ಇದ್ದಿತು.

ಬಹು ಮುಖ್ಯವಾದ ಅಂಶವೆಂದರೆ ವೈದಿಕ ಮತ್ತು ಜೈನಧರ್ಮದ ಅನುಯಾಯಿಗಳು ಹೆಚ್ಚಿನ ಸಂಖ್ಯೆಯಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು. ಪಾಂಡಿತ್ಯದಿಂದ ಕೂಡಿದ್ದ ಈ ಆದ್ಯ ಕವಿಗಳ ಮೇಲೆ ಸಂಸ್ಕೃತ ಸಾಹಿತ್ಯದ ಪ್ರಭಾವವು ದಟ್ಟವಾಗಿಯೇ ಆಗಿತ್ತು. ಹಲವು ಕವಿಗಳಿಗೆ ರಾಜಾಶ್ರಯ ದೊರೆತದ್ದರಿಂದ ಸಹಜವಾಗಿ ಅವರು ತಮ್ಮ ರಾಜರ ಧರ್ಮ ಯಾವುದಿತ್ತೋ ಅದನ್ನನುಸರಿಸಿ ತಮ್ಮ ಕಾವ್ಯರಚನೆಯನ್ನು ಮಾಡುತ್ತಿದ್ದುದರಿಂದ ಆ ಧರ್ಮಗಳ ಪ್ರಭಾವ ಅವರ ಕೃತಿಗಳಲ್ಲಿ ಇರುತ್ತಿತ್ತು. ಜೊತೆಗೆ ಸ್ವತಃ ಕವಿಯ ಧರ್ಮವೂ ಅವನ ಕೃತಿ ರಚನೆಯಲ್ಲಿ ಪ್ರಭಾವ ಬೀರುತ್ತಿತ್ತು.

ಈ ನಿಟ್ಟಿನಲ್ಲಿ ಕನ್ನಡದ ಉಪಲಬ್ಧ ಕೃತಿಗಳಲ್ಲಿ ಅತ್ಯಂತ ಪ್ರಾಚೀನವಾದ 'ಕವಿರಾಜಮಾರ್ಗ'ವನ್ನು ಗಮನಿಸಬಹುದು. ಎಂ.ವಿ.ಸೀ.ಯವರು ಕವಿರಾಜಮಾರ್ಗದ ಪೀಠಿಕೆಯಲ್ಲಿ ವಿವರಿಸಿರುವಂತೆ ಅದು ರಚನೆಯಾದ ಕಾಲ ಸುಮಾರು ಕ್ರಿ.ಶ. ೮೫೦ ಮಾರ್ಗಕಾರನ ಧರ್ಮ ಜೈನ ಧರ್ಮವಾಗಿದೆ. ಹಾಗೂ ಆಶ್ರಿತ ರಾಜನಾದ ನೃಪತುಂಗನ ಧರ್ಮ ಆಗ್ಗೆ ವೈದಿಕ ಧರ್ಮವೇ ಆಗಿತ್ತು. ಅನುಸಂಧಾನವನ್ನು ಪರಭಾಷೆಯ ಹಿಡಿತದಿಂದ ಬಿಡಿಸಿಕೊಳ್ಳುವ ಪ್ರಯತ್ನವನ್ನೂ ಮಾಡಿದೆ. ಈ ಸ್ವಕೀಯತೆಯ ಪ್ರಜ್ಞೆಯು ಆ ಕಾಲಘಟ್ಟದಲ್ಲಿ ಒಂದು ಬಂಡಾಯವಾಗಿದೆ.

ಕ್ರಿ. ಶ. ೯೨೫ ರ(?) ಸುಮಾರಿನಲ್ಲಿ ರಚನೆಯಾದ ಶಿವಕೋಟ್ಯಾಚಾರ್ಯ ಕವಿಯ ವಡ್ಡಾರಾಧನೆಯಲ್ಲಿ ಭಾಷೆ ಮತ್ತು ಶೈಲಿಗಳೆರಡಲ್ಲಿಯೂ ದೊಡ್ಡ ಮಟ್ಟದ ಬದಲಾವಣೆ ಇರುವುದನ್ನು ಕಾಣಬಹುದು. ಪ್ರಾಕೃತ ಭಾಷೆಯ ಶ್ಲೋಕಗಳನ್ನು ಇದರಲ್ಲಿ ಬಳಸಿಕೊಳ್ಳಲಾಗಿದೆ. ಹಿಂದಿನ ಕಾವ್ಯ ಶೈಲಿಗಿಂತ ಸುಲಭವಾದ ಗದ್ಯ ಶೈಲಿಗೆ ದಿಕ್ಕು ಬದಲಿಸಿತು. ಜೈನಧರ್ಮವನ್ನು ಅದರ ಆಚರಣೆಗಳನ್ನು ಮತ್ತಷ್ಟು ಗಟ್ಟಿಗೊಳಿಸುವ ಕಾರಣದಿಂದ ಬಂದ ಈ ಕಥೆಗಳಲ್ಲಿ ನಾಯಕ ನಾಯಕಿಯರೆಲ್ಲರೂ ಉತ್ತಮ ಕುಲದಲ್ಲಿ ಹುಟ್ಟಿ ಹೆಚ್ಚಾಗಿ ಪುರುಷರು ಮಾತ್ರ ಮುಕ್ತಿಯನ್ನು (ಕೇವಲ) ಹೊಂದುತ್ತಾರೆ. ದಲಿತ ಕುಲದ ಬಗ್ಗೆ ವೈದಿಕ ಧರ್ಮದ ನಿಲುವನ್ನೇ ಇಲ್ಲಿಯೂ ಬಳಸಿಕೊಳ್ಳಲಾಗಿದೆ. ಮಾರ್ಗಕಾರನಂತೆಯೇ ಇಲ್ಲಿಯೂ ಸಂಸ್ಕೃತದ ಕಥೆಗಳನ್ನು ಕನ್ನಡೀಕರಿಸಿದ್ದು ಬಹುಮುಖ್ಯ ಬದಲಾವಣೆ.

ಕನ್ನಡ ಸಾಹಿತ್ಯದಲ್ಲಿ ಅನಂತರದಲ್ಲಿ ಪಂಪನ ಕೃತಿಗಳಾದ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯಗಳು ಮುಖ್ಯವಾಗಿವೆ. ಮೊದಲೇ ಇದ್ದ ಧಾರ್ಮಿಕ ಕಾವ್ಯರಚನೆಯ ಜೊತೆಗೆ ಲೌಕಿಕ ಕಾವ್ಯವನ್ನು ರಚಿಸುವ ಮೇಲ್ಪಂಕ್ತಿಯನ್ನು ಪಂಪ ಹಾಕಿಕೊಟ್ಟನು. ಆದಿಪುರಾಣವು ಪೂರ್ಣವಾಗಿ ಜೈನಧರ್ಮದ ಮಹಾಪುರುಷನ ಕಥೆಯನ್ನು ಸಾರಿದರೆ, ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯವು ಅನೇಕ ಕಾರಣಗಳಿಗಾಗಿ ಮಹತ್ವದ್ದೆನಿಸುತ್ತದೆ.

'ವಿಕ್ರಮಾರ್ಜುನ ವಿಜಯ'ದಲ್ಲಿ ಆಶ್ರಿತರಾಜ, ನೆಲ, ನಾಡು, ನುಡಿಗಳ ಬಗ್ಗೆ ಪಂಪ ಹೆಮ್ಮೆಯ ಮಾತುಗಳನ್ನಾಡಿದ್ದಾನೆ. ಹೀಗೆ ತನ್ನ ನೆಲ ಜಲದ ಬಗ್ಗೆ ಅಭಿಮಾನದ ಮಾತುಗಳನ್ನು ಆಡಿರುವುದು ಸ್ವಕೀಯ ಪ್ರಜ್ಞೆ ಎನಿಸಿಕೊಳ್ಳುತ್ತದೆ. ಪಂಪಭಾರತವು ಜೈನ ಕವಿಯೊಬ್ಬನು ರಚಿಸಿದ ವೈದಿಕ ಕಾವ್ಯ. ಈ ಹಿಂದೆ ಪರಂಪರೆಯಿಂದ ವೈದಿಕ ಮನೆತನದವನಾಗಿದ್ದ ಪಂಪನು ಜೈನನಾಗಿ ಆ ಧರ್ಮದ ಆದಿಪುರುಷನ ಬಗ್ಗೆಯೂ ಕಾವ್ಯ ರಚಿಸಿದನು. ಆದರೆ ಪಂಪಭಾರತವು ಜೈನ ಮತ್ತು ವೈದಿಕ ಎರಡೂ ಧರ್ಮಗಳ ಒತ್ತಡದ ನಡುವೆ ಕಾವ್ಯ ರಚಿಸಿದ್ದು ಒಂದು ಸಾಧನೆಯೇ ಸರಿ. ಏಕೆಂದರೆ ಪಂಪಭಾರತವು ಜೈನನೊಬ್ಬ ರಚಿಸಿದನೆಂಬ ಕಾರಣಕ್ಕೆ ವೈದಿಕರಿಂದಲೂ, ವೈದಿಕ ಕಾವ್ಯ ಎಂಬ ಕಾರಣಕ್ಕೆ ಜೈನರಿಂದಲೂ ಒಂದು ಅಂತರದಲ್ಲಿ ನಿಂತಿತು. ಆದರೆ ಪಂಪನ ಕವಿತಾಶಕ್ತಿಯು ಅದನ್ನೆಲ್ಲವನ್ನೂ ಮೀರಿ ಮಹಾಭಾರತದ ಪಾತ್ರಗಳಲ್ಲಿ ಅರ್ಜುನನಿಗೆ ಹೋಲಿಸಿದ

ತನ್ನ ಒಡೆಯನಾದ ಅರಿಕೇಸರಿಗಿಂತ ಮಿಗಿಲಾದ ಕರ್ಣನ ಪಾತ್ರವನ್ನು ಸೃಷ್ಟಿಸಿದನು. ಒಂದೆಡೆ ಲೌಕಿಕ ಕಾವ್ಯವಾಗಿಯೂ, ರಾಜನಿಗಿಂತ(ಅರ್ಜುನ) ಮಿಗಿಲಾಗಿ ಸಾಮಾನ್ಯರನ್ನು (ಕರ್ಣನನ್ನು) ಮೆರೆಸಿದನು. ಕರ್ಣನ ನನ್ನಿಯನ್ನೂ ಕುಲವನ್ನೂ ಪ್ರಕಟಿಸುತ್ತಾ

'ನೆನೆಯದಿರಣ್ಣ ಭಾರತದೊಳಿಂ ಪೆರರನಾರುಮನೊಂದೆ ಚಿತ್ತದಿಂ|
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ ||
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ |
ರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನಮಲ್ತೆ ಭಾರತಂ ||

ಬ್ರಹ್ಮಶಿವ (ಕಾಲ ಕ್ರಿ. ಶ. ೧೧೫೦) ನ ಸಮಯ ಪರೀಕ್ಷೆಯಲ್ಲಿ 'ಅನ್ಯಮತದ ವಿಡಂಬನೆಯನ್ನು ಜೈನಮತದ ಸರ್ವಶ್ರೇಷ್ಠತೆಯನ್ನು ಕಾಣಬಹುದು'ಇದರ ಕಥೆಯಲ್ಲಿ ಜೈನಮತದ್ದು, ಜನಸಾಮಾನ್ಯರೇ ಪಾತ್ರಗಳು.[2]

ಇದರಲ್ಲಿ ಅನ್ಯಮತಗಳ ಮೂಢನಂಬಿಕೆಗಳನ್ನು ವಿಡಂಬಿಸಿದ್ದಾರೆ. ಮುಖ್ಯವಾಗಿ ವೈದಿಕ ಧರ್ಮದ ವಿಡಂಬನೆ ನಡೆದಿದೆ. ಹೀಗೆ ಪ್ರಶ್ನಿಸುವ ಪ್ರವೃತ್ತಿ ಆ ಕಾಲಕ್ಕೆ ಒಂದು ಬಂಡಾಯದ ವಿಷಯವಾಗಿದೆ. ಪಂಪಯುಗದ ಅನೇಕ ಕವಿಗಳಲ್ಲಿ ಇಂತಹ ಅಂಶಗಳು ಗುರುತಿಬಹುದಾಗಿದೆ. ಪಂಪನಿಗೆ ದೊರೆತ ಯಶಸ್ಸಿನಿಂದಾಗಿ ಮುಂದಿನವರು ಆ ರೀತಿಯಲ್ಲಿಯೇ ಸಾಹಿತ್ಯ ರಚನೆಗೆ ತೊಡಗಿದರೋ ಅಥವಾ ನಿಜವಾಗಿ ಸ್ವಪ್ರೇರಿತ ಬಂಡಾಯದ ದನಿಯೋ ಎಂದು ಹೇಳುವುದು ಕಷ್ಟವಾಗುತ್ತದೆ.

ಕ್ರಿ.ಶ. ೧೦೩೦ರ ವೇಳೆಗೆ ದುರ್ಗಸಿಂಹನು ಪಂಚತಂತ್ರವೆಂಬ ಗದ್ಯಪ್ರಧಾನವಾದ ಕೃತಿಯೊಂದನ್ನು ರಚಿಸಿದನು. ಇದರಲ್ಲಿನ ಬಂಡಾಯದ ಅಂಶಗಳನ್ನು ಬರಗೂರರು ತಮ್ಮ ಲೇಖನದಲ್ಲಿ ದಾಖಲಿಸಿದ್ದಾರೆ. "ದಡ್ಡ ರಾಜಕುಮಾರರ ಬುದ್ಧಿ ಚಿಗುರಿಸಲು ಹೇಳಿದ ಕತೆಗಳೆಂದು ಪಂಚತಂತ್ರದ ಕತೆಗಳಿಗೆ ಒಂದು ವಿಶಿಷ್ಟತೆ ಇದೆ. ಪಂಚತಂತ್ರದ ಒಂದೊಂದು ಪ್ರಕರಣದ ಪ್ರಧಾನ ಕತೆ ನಿರ್ದಿಷ್ಟ ನಿಲುವನ್ನು ಪ್ರತಿಪಾದಿಸುವಾಗ ಅದರೊಳಗೆ ಸೇರಿಕೊಂಡಿರುವ ಉಪಕತೆಗಳು ಭಿನ್ನ ವೈಚಾರಿಕ ನೆಲೆಗಳನ್ನು ನಿರ್ದೇಶಿಸುತ್ತಾ ಸಾಮಾಜಿಕ ಬದುಕಿನ ಸಂಘರ್ಷ ಸ್ಥಿತಿಯನ್ನು ದಾಖಲಿಸುತ್ತದೆ. ..........ರಾಜ ಪ್ರಭುತ್ವವನ್ನು ಕುರಿತ ಪರ ವಿರೋಧಿ ಅಂಶಗಳೂ ಹೇರಳವಾಗಿದೆ. 'ಭೇದ ಪ್ರಕರಣ'ದಲ್ಲಿ ಸಂಜೀವಕನು ದಮನಕನ ಪ್ರಥಮ ಭೇಟಿಯ ಸಂದರ್ಭದಲ್ಲಿ ಆಡುವ ರಾಜವಿರೋಧಿ ಮಾತುಗಳು ಮಹತ್ವಪೂರ್ಣವಾಗಿದೆ. ಅಂತೆಯೇ ಕರಟಕ ಹೊಟ್ಟೆ ಪಾಡಿಗಾಗಿ ರಾಜನ ಸೇವೆ ಮಾಡಬೇಕಾಗಿದೆಯೆಂದು ಹೇಳುವ ಮಾತು ಮತ್ತೊಂದೆಡೆ "ಅರಸಿಂಗೆ ಹಿತವ ಮಾಡುವಾತಂ ಪ್ರಜೆಗೆ ಹಗೆಯೆಹನು ಪ್ರಜೆಗೆ ಹಿತವ ಮಾಡುವಾತನಸುಗಳ ಕೈವಿಡಿಯರು" ಎಂಬಂಥ ಮಾತುಗಳು ಪಂಚತಂತ್ರದ ಒಡಲಲ್ಲಿರುವ ವಿಚಾರವೊಂದರ ಸೂಚಿ ಎನ್ನಬಹುದು...... ಹೆಸರಿಗೆ ಪ್ರಾಣಿ ಕತೆಗಳಿದ್ದರೂ ಮಾನವ ಸಮಾಜದ

ಸ್ವರೂಪವನ್ನು ದಾಖಲಿಸುವ ಮಹತ್ವ 'ಪಂಚತಂತ್ರ'ಕ್ಕಿದೆ. ಅನೇಕ ಉಪಕತೆಗಳಲ್ಲಿ ಜಾತಿ ಮತ್ತು ವರ್ಗಮೂಲವಾದ ಸಾಮಾಜಿಕ ವಿವರ-ವಿಚಾರಗಳ ಧ್ವನಿಯಿದೆ. (ಉದಾಹರಣೆಗೆ ಶಿವಭೂತಿಯ ಕತೆ. ಎರಡು ಗಿಳಿಗಳ ಕತೆ. ಮುನಿಯಂ ಇಲಿಯುಂ ಇತ್ಯಾದಿ)ಒಂದೇ ವರ್ಗದೊಳಗಿನ ವೈರುಧ್ಯಗಳನ್ನು ಸೂಚಿಸಲಾಗಿದೆ.

ಹೀಗೆದಾಕ್ಷಣ ಇದೇ 'ಪಂಚತಂತ್ರ' ರಾಜವಿರೋಧಿ ಕೃತಿಯೆಂದೇನೂ ಅಲ್ಲ. ರಾಜಪ್ರಭುತ್ವದ ಸಂದರ್ಭದಲ್ಲಿ ಇದ್ದ ವಿರೋಧಿ ವಿಚಾರಗಳನ್ನು ಕತೆಯ ವಿವರಣೆಗಳಾಗಿ ಒಡಮೂಡಿಸುತ್ತ ಹೋಗುವ ತಂತ್ರ ಅಷ್ಟಿರಮಟ್ಟಿಗೆ ಗಮನಾರ್ಹ. ಬಂಡಾಯ ದನಿಯನ್ನು ದಾಖಲಿಸುವ, ಮತ್ತು ಕೆಟ್ಟ ರಾಜನನ್ನು ವಿರೋಧಿಸಿ ಒಳ್ಳೆಯ ರಾಜನಿಗೆ ಹಾರೈಸುವ ರೀತಿ ಚಾರಿತ್ರಿಕ ದೃಷ್ಟಿಯಿಂದ ಪ್ರಗತಿಪರ ಎನ್ನಬಹುದು.[3]

ಆದ್ಯವಚನಕಾರನಾದ ಜೆಡರ ದಾಸಿಮಯ್ಯ ಅಥವಾ ದೇವರ ದಾಸಿಮಯ್ಯನು ಸುಮಾರು ಕ್ರಿ.ಶ. ೧೦೫೦ರಲ್ಲಿ ಬದುಕಿದ್ದವನು. ವೀರಶೈವನಾದ ಈತ ವಚನ ಶೈಲಿಯಲ್ಲಿ ಸಮಾಜವನ್ನು ವಿಡಂಬಿಸುವ ಕಾವ್ಯವನ್ನು ರಚಿಸತೊಡಗಿದೆ. ಕಾಯಕ, ಸಾಮಾಜಿಕ ಸಮಾನತೆ, ಶಿವಭಕ್ತಿ ಮುಂತಾದ ವಿಚಾರಗಳನ್ನು ಚಿಂತಿಸಿದ ಮತ್ತು ಅದೇ ರೀತಿಯಲ್ಲಿ ಸಮಾಜದಲ್ಲೂ ಬದಲಾವಣೆಯನ್ನು ತರಲು ಪ್ರಯತ್ನಿಸಿದವರಲ್ಲಿ ಮೊದಲಿಗರಾದರು.

ಜೇಡರ ದಾಸಿಮಯ್ಯನನ್ನು ಮೊದಲುಗೊಂಡು ನೂರಾರು ವಚನಕಾರರು ತಮ್ಮ ಕಾಲದ ಸ್ಥಗಿತಗೊಂಡ ಸಂಪ್ರದಾಯಗಳ ವಿರುದ್ಧ ದನಿ ಎತ್ತಿದರು. ವಚನ ಶೈಲಿಯು ಗದ್ಯ ಪದ್ಯಗಳ ಮಿಶ್ರಣ. ಅದು ಕೇವಲ ಒಂದು ಸಾಹಿತ್ಯ ರೂಪವಾಗಿ ಮಾತ್ರ ಉಳಿಯದೆ 'ಕೊಟ್ಟಮಾತು', 'ಪ್ರಮಾಣ ಮಾಡುವುದು' ಎಂಬ ನೈತಿಕ ಮೌಲ್ಯವನ್ನು, 'ನುಡಿದಂತೆ ನಡೆ'ಎಂಬ ಸನ್ಮಾರ್ಗವನ್ನೂ ಸಾಮಾಜಿಕ ಸಾಮರಸ್ಯವನ್ನು ಬಿಂಬಿಸುವ ಸಾಹಿತ್ಯ ರೂಪವಾಗಿದೆ.

ವಚನಗಳು ಸಾಮಾಜಿಕ ಪರಿಣಾಮಗಳಿಂದಾಗಿಯೇ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಧಾರ್ಮಿಕ ಹಾಗೂ ಸಾಮಾಜಿಕ ಜೀವನದಲ್ಲಿ ಈ ಯುಗದಲ್ಲಿ ಬಹುದೊಡ್ಡ ಬದಲಾವಣೆಗಳಾದವು. ಈವರೆಗಿನ ಸಾಹಿತ್ಯವು ಹೆಚ್ಚಾಗಿ ಪಾರಲೌಕಿಕ ವಿಚಾರವನ್ನು ಕೇಂದ್ರೀಕರಿಸಿದ್ದರೆ, ವಚನಯುಗದಲ್ಲಿ ಸಮಾಜವೇ ಕೇಂದ್ರವಾಯಿತು. ಈ ಕಾಲಘಟ್ಟದಲ್ಲಿ ಧರ್ಮ ಮತ್ತು ರಾಜಾಶ್ರಯ ಎರಡರ ಬೆಂಬಲವೂ ಕವಿಗಳಿಗೆ ತಪ್ಪಿತೆನ್ನಬಹುದು. ದುಡಿಮೆಯೇ ಧರ್ಮ ಎಂಬ ಹೊಸ ನಿಯಮಕ್ಕೆ ಜನ ಸಮೂಹ ಒಳಗಾಗಿತ್ತು. ರಾಜಾಶ್ರಯದ ಹಂಗಿಲ್ಲದ ಶ್ರಮಜೀವಿಗಳಿಂದಲೇ ಹೆಚ್ಚಾಗಿ ರಚನೆಯಾದ ವಚನಗಳಲ್ಲಿ ಸಮಾಜದ ಎಲ್ಲ ರೀತಿಯ ನ್ಯೂನತೆಗಳನ್ನೂ ಎತ್ತಿ ತೋರಿಸಿ ಮಾನವತಾವಾದವನ್ನು ಮೆರೆಸಿದರು. ಧರ್ಮ, ಜಾತಿಗಳ ಹುಳುಕುಗಳ ಬಗ್ಗೆ ಟೀಕೆ, ಹೆಣ್ಣು-ಗಂಡಿನ ನಡುವೆ ಸಮಾನತೆ ಕಾಯಕ ತತ್ವದ ಸಮರ್ಥನೆ, ಜಾತೀಯತೆಗೆ ಬದಲಾಗಿ ಆಧ್ಯಾತ್ಮ ಮತ್ತು ಕಾಯಕ ತತ್ವವನ್ನು ಜನರಲ್ಲಿ ಬಿತ್ತಿದರು. ವಚನಗಳ ಆ ಸಾಮಾಜಿಕ ಪರಿಸ್ಥಿತಿಯಲ್ಲಿ ಶ್ರೇಷ್ಠತೆಯನ್ನು ಪಡೆದುಕೊಂಡಿದ್ದವು. ಸಾಹಿತ್ಯದ ಕಾರಣಗಳಿಗಿಂತ ಧರ್ಮ ಮತ್ತು ಬಂಡಾಯದ ಗುಣಗಳಿಂದಾಗಿ ಹೆಚ್ಚು ಚಾಲ್ತಿಯಲ್ಲಿತ್ತೆಂದು ಹೇಳಬಹುದು. ತಮ್ಮ ಅನುಭವಗಳು, ಕಲ್ಪನೆಗಳು, ವಿಚಾರಗಳು, ಕಂಡ ದರ್ಶನ

ಇವುಗಳನ್ನು ಸರಳ ಭಾಷೆಯಲ್ಲಿ ವಚನಕಾರರು ಹಿಡಿದಿಟ್ಟಿದ್ದಾರೆ. ಇಲ್ಲಿ ಬರೆಯುವವರೂ ಅನುಭವಿಸುವವರೂ, ಕೇಳುಗರೂ ಎಲ್ಲ ಶ್ರಮಜೀವಿಗಳೇ.

ಅಜ್ಞಾತ ವಚನಕಾರರೊಬ್ಬರ ವಚನವೊಂದನ್ನು ಗಮನಿಸೋಣ

"ನಡಸು ದೇವಾ ಭಿಕ್ಷಾಯೆಂಬ ಶಬ್ದಕ್ಕೆ
ಅಲ್ಲಿ ಹೋಗಿ ಭಿಕ್ಷಾ ಭಿಕ್ಷಾಯೆಂದಡೆ
ಆರೂ ನೀಡದಂತೆ ಮಾಡು
ತಥಾಪಿನ ನೀಡಿದಡೆ
ಆ ನೀಡುವ ಹಂಚು ಎಡಹಿ ಒಡೆವಂತೆ ಮಾಡು
ನಿರ್ಧನಪ್ರಿಯ ರಾಮೇಶ್ವರಾ."[4]

ಮುಖ್ಯವಾಗಿ ಕಾಯಕವನ್ನು ಕೈಗೊಳ್ಳದೆ ಬರಿಯ ಭಿಕ್ಷಾಟನೆಯನ್ನು ಮಾಡುವುದನ್ನು ಇಲ್ಲಿ ವಿರೋಧಿಸಲಾಗಿದೆ. ಶ್ರಮಕ್ಕೆ ಪ್ರತಿಫಲ ಸಿಗಬೇಕೆಂಬ ಆಶಯವೂ ಇಲ್ಲಿ ವ್ಯಕ್ತವಾಗಿದೆ.

ಧಾರ್ಮಿಕ ಚೌಕಟ್ಟಿನಲ್ಲಿರುವ ಮತ್ತೊಂದು ವಚನವು ಈ ರೀತಿ ಇದೆ.

"ಮಂಡೆಯ ಬೋಳಿಸಿಕೊಂಡು
ತುಂಡುಗಂಬಳಿಯ ಹೊದ್ದವರ ಕಂಡಡೆ
ನಂಬಲಾರೆ ನಚ್ಚಲಾರೆ
ಈ ವೇಷವ ನಾಚಿದೆ ಅಮುಗೇಶ್ವರಾ"[5]

ಈ ವಚನದಲ್ಲಿ ತೋರಿಕೆಯ ಭಕ್ತಿಯನ್ನು ನಿಂದಿಸಲಾಗಿದೆ. ಅಂತೆಯೆ ಸ್ತ್ರೀಯು ತನ್ನ ದೃಷ್ಟಿಯಲ್ಲಿ ಸಮಾಜವನ್ನು ನೋಡಿದ ರೀತಿಯೂ ಇದರಲ್ಲಿ ವ್ಯಕ್ತವಾಗಿದೆ. ನುಲಿಯ ಚಂಪಯ್ಯನ ವಚನವೊಂದರಲ್ಲಿ ದ್ರವ್ಯದ ಸಮಾನತೆಯನ್ನು ಪ್ರತಿಪಾದಿಸುತ್ತಾರೆ.

ಸತ್ಯ ಶುದ್ಧ ಕಾಯಕದಲ್ಲಿ ಚಿತ್ತ
ಎಚ್ಚಂದವಾಗಿರಬೇಕು
ನೇಮದ ಕೂಲಿ ಅಂದಿನ
ನಿತ್ಯ ಕಾಯಕದಲ್ಲಿ ಸಂದಿರಬೇಕು

ನೇಮದ ಕೂಲಿಯ ಬಿಟ್ಟು

ಹೇಮದಾಶೆಗೆ ಕಾಮಿಸಿ

ದ್ರವ್ಯವ ಹಿಡಿದರೆ

ತಾ ಮಾಡುವ ಸೇವೆ ನಷ್ಟವಯ್ಯ"6

ಅಂತೆಯೇ ಬಸವಣ್ಣನವರ ಪ್ರಸಿದ್ಧ ವಚನವಾದ 'ನುಡಿದರೆ ಮುತ್ತಿನ ಹಾರದಂತಿರಬೇಕು'..... ಈ ವಚನದಲ್ಲಿ ಲೌಕಿಕ ಜೀವನದಲ್ಲಿ ಪ್ರಾಮಾಣಿಕತೆಯಿಂದ ನಡೆಯಬೇಕೆಂದು ಹೇಳುತ್ತಲೇ ಶಿವಪಥವನ್ನು ಕಾಣುವ ಉಪಾಯವನ್ನು ಹೇಳುತ್ತಾರೆ. ಇಹಕ್ಕೂ-ಪರಕ್ಕೂ ಹೀಗೆ ತಳಕು ಹಾಕಿ ವಚನಕಾರರು ಸಾಮಾಜಿಕ ಕಾಳಜಿ ಹಾಗೂ ದೈವಭಕ್ತಿ ಎರಡನ್ನೂ ಬೋಧಿಸುತ್ತಾರೆ. ಇದರಿಂದಲೆ ಈ ವಚನ ಸಾಹಿತ್ಯದ ಮಹತ್ವ ಹೆಚ್ಚಿದೆ ಎನ್ನಬಹುದು. ಭಾಷೆಯ ವಿಷಯವಾಗಿಯೂ ಆಡುಭಾಷೆಯನ್ನೂ ನುಡಿಗಟ್ಟುಗಳನ್ನೂ ಬಳಸಿಕೊಂಡಿದ್ದು ಜನಸಾಮಾನ್ಯರಿಗೆ ತಲುಪುವಲ್ಲಿ ಯಶಸ್ವಿಯಾಯಿತು.

ವಚನ ಯುಗದ ತರುವಾಯ ಅವರ ಪ್ರಭಾವ ಮುಂದಿನ ಕವಿಗಳ ಮೇಲೂ ಆಗಿರುವುದನ್ನು ಕಾಣಬಹುದು. ಪ್ರಮುಖವಾಗಿ ಸುಮಾರು ಕ್ರಿ.ಶ. ೧೨೦೦ರಲ್ಲಿ ಬದುಕಿದ್ದ ಹರಿಹರ ತನ್ನ 'ಗಿರಿಜಾ ಕಲ್ಯಾಣ' ಕಾವ್ಯಕ್ಕೆ ಶೈವ ಪುರಾಣದ ಕಥಾವಸ್ತುವನ್ನು ಆಯ್ದುಕೊಂಡು 'ಭಕ್ತ ಕವಿ', 'ಶಿವಕವಿ' ಎಂದು ಹೆಸರಾದ. 'ರಗಳೆ' ಇವನ ಕಾವ್ಯಾಭಿವ್ಯಕ್ತಿಯ ಮಾಧ್ಯಮವಾಯಿತು. ತನ್ನ ಸಮಕಾಲೀನ ಕವಿಗಳಿಗಿಂತ ವಿಭಿನ್ನವಾದ ಶೈಲಿಯಲ್ಲಿ ಬರೆದನು. ಚಂಪುವಿನಲ್ಲಿ ರಚನೆ ಮಾಡುತ್ತಿದ್ದ ಕಾಲದಲ್ಲಿ ರಗಳೆಯನ್ನು ಪ್ರಯೋಗಿಸಿದನು.

ಕ್ರಿ. ಶ. ಸುಮಾರು ೧೨೨೫ರಲ್ಲಿ ಜೀವಿಸಿದ್ದು ಹರಿಹರನ ಸಮಕಾಲೀನನಾಗಿದ್ದ ರಾಘವಾಂಕನು ೬ ಕಾವ್ಯಗಳನ್ನು ರಚಿಸಿದನೆಂದು ತೋರುತ್ತದೆ. 'ಹರಿಶ್ಚಂದ್ರ ಕಾವ್ಯ'ವನ್ನು ವಾರ್ಧಕ ಷಟ್ಪದಿಯಲ್ಲೂ, 'ವೀರೇಶ ಚರಿತ್ರೆ'ಯನ್ನು ಉದ್ದಂಡ ಷಟ್ಪದಿಯಲ್ಲೂ ರಚಿಸಿದ್ದಾನೆ. ಮತ್ತೊಂದು ಪ್ರಸಿದ್ಧ ಕಾವ್ಯವಾದ 'ಸಿದ್ಧರಾಮ ಪುರಾಣ'ದಲ್ಲಿ ಸೊನ್ನಲಿಗೆಯ ಸಿದ್ಧರಾಮನ ಕಥೆ ಇದೆ. ಇಡೀ ಕಾವ್ಯದಲ್ಲಿ ಸಿದ್ಧರಾಮ ತನ್ನ ಹಳ್ಳಿಯನ್ನು ಉದ್ಧರಿಸುವ ಜನಪರವಾದ ಕೆಲಸಗಳನ್ನು ಕೈಗೊಳ್ಳುತ್ತಾನೆ. ಡಿ.ಎಲ್.ಎನ್.ರವರು ಸಿದ್ಧರಾಮನನ್ನು ಕುರಿತು 'ಪ್ರತಿಯೊಬ್ಬ ವ್ಯಕ್ತಿಯೂ ಸಿದ್ಧರಾಮನಾದಡೆ ತನ್ನ ಹಳ್ಳಿಯನ್ನು ಬೆಳಗಲು ಪ್ರಯತ್ನಿಸಿದರೆ ನಾಡಿಗೆ ನಾಡೇ ಏಳಿಗೆಯ ಶಿಖರವನ್ನೇರೀತು. ಸಿದ್ಧರಾಮನಂಥ ಜನನಾಯಕನ ಚಿತ್ರವನ್ನು ರಾಘವಾಂಕ ನಮಗೆ ತೋರಿಸಿ ಅವನಂತೆ ಕಾಯಕ ಮಾಡಿದರೆ ದೇಶದ ಅಭ್ಯುದಯ ಕ್ಷಿಪ್ರದಲ್ಲೇ ಆಗಬಲ್ಲುದೆಂಬ ಸಂದೇಶವನ್ನು ನೀಡಿದ್ದಾನೆ."7 ಹೀಗೆ ಹರಿಹರ ಗದ್ಯ ರಚನೆಕಾರನಂತೆ ಕಂಡು ಬಂದರೆ ರಾಘವಾಂಕನು ಷಟ್ಪದಿಯಲ್ಲಿ ಕಾವ್ಯ ರಚಿಸಿ ಕನ್ನಡದಲ್ಲಿ ಹೊಸ ಸಾಹಿತ್ಯ ಮಾರ್ಗವನ್ನೇ ನಿರ್ಮಿಸಿದನು. ಸುಮಾರು ೧೭ನೇ ಶತಮಾನದವರೆವಿಗೂ ಷಟ್ಪದಿಯನ್ನು ಬಳಸಿ ಬರೆಯುವ ಕ್ರಮ ಉಳಿದುಕೊಂಡದ್ದು ಇವನ ಹಿರಿಮೆ. ಚಂಪು ಶೈಲಿಯು ತಪ್ಪಿಹೋಗಿ ಷಟ್ಪದಿಯೇ ರಾರಾಜಿಸತೊಡಗಿತು.

ಈ ಮಧ್ಯೆ ಭಾಮಿನೀ ಷಟ್ಪದಿಯಲ್ಲಿ ಕುಮಾರವ್ಯಾಸನು 'ಕರ್ನಾಟಕ ಭಾರತ ಕಥಾಮಂಜರಿ'ಯನ್ನು ರಚಿಸಿ ಹಾಡುಗಬ್ಬವಾಗಿಸಿ ಪ್ರಸಿದ್ಧನಾದನು. ಜನಸಾಮಾನ್ಯರೂ ಈ ಕೃಷ್ಣಚರಿತೆಯನ್ನ ಕೇಳುವಂತೆ ಮಾಡಿದ್ದು ಆ ಕಾಲದ ಒಂದು ಸಾಧನೆಯೇ ಸರಿ. ಪಂಪ, ರನ್ನರ ವೀರಕಾವ್ಯದ ಹಿಡಿತದಿಂದ ತಪ್ಪಿಸಿಕೊಂಡು ಭಕ್ತಿಕವಿಯಾಗಿ ಭಾರತವನ್ನು ರಚಿಸಿದ್ದು ಇವನ ಹಿರಿಮೆ.

ಕುಮಾರ ವ್ಯಾಸನ ಪ್ರಸಿದ್ಧವಾದ ಈ ಪದ್ಯವನ್ನು ಗಮನಿಸೋಣ

'ಅರಸು ರಾಕ್ಷಸ ಮಂತ್ರಿಯೆಂಬುವ
ಮೊರೆವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಭಿನ್ನಪದನಿನ್ನಾರು ಕೇಳುವರು
ಉರಿವುರಿವುತಿದೆ ದೇಶ ನಾವಿ
ನ್ನಿರಲು ಬಾರದೆನುತ್ತ ಜನ ಬೇ
ಸರಿನ ಬೇಗೆಯಲಿರದಲೇ ಭೂಪಾಲ ಕೇಳೆಂದ.'[8]

ಕರ್ನಾಟ ಭಾರತ ಕಥಾಮಂಜರಿಯ ಈ ಪದ್ಯಭಾಗವು ಆಳುವ ವರ್ಗದ ದೌರ್ಜನ್ಯದ ಪರಮಾವಧಿಯನ್ನು ಸೂಚಿಸುವಂತೆಯೇ ಅದನ್ನು ಪ್ರತಿಭಟಿಸುವ ಒಂದು ವಿಧಾನವಾಗಿದೆ.

ಸುಮಾರು ೧೪೩೦ರಲ್ಲಿ ಬದುಕಿದ್ದ ಚಾಮರಸನ ಪ್ರಭುಲಿಂಗಲೀಲೆಯೂ ಭಾಮಿನೀ ಷಟ್ಪದಿಯ ಕಾವ್ಯವಾಗಿದ್ದು. ಅಲ್ಲಮ ಪ್ರಭುವಿನ ಜೀವನವನ್ನು ಆಧರಿಸಿದೆ. ಇವನ ತಂಗಿಯನ್ನು ಗದುಗಿನ ನಾರಣಪ್ಪ ಮದುವೆಯಾಗಿದ್ದನೆಂದು ಪ್ರತೀತಿ ಇದ್ದು ನಾರಣಪ್ಪ ಹಾಗು ಚಾಮರಸರ ನಡುವೆ ಕಾವ್ಯದ ವಿಚಾರವಾಗಿ ಒಳಜಗಳವಿದ್ದಿತೆಂದು ಹೇಳಲಾಗುತ್ತದೆ. ಎಂದರೆ ಆ ಕಾಲಕ್ಕೆ ವೀರಶೈವನಾದ ಚಾಮರಸನ ತಂಗಿಯನ್ನು ಬ್ರಾಹ್ಮಣನಾದ ನಾರಣಪ್ಪ ಮದುವೆಯಾಗಿದ್ದು ಇವರ ಮೇಲೆ ಬಸವಣ್ಣನವರ ಪ್ರಭಾವ ಆಗಿರಬಹುದೆಂದು ತೋರುತ್ತದೆ. ಪ್ರಭುಲಿಂಗಲೀಲೆಯಲ್ಲಿ ತನ್ನ ಧರ್ಮವನ್ನು ಪ್ರತಿಪಾದಿಸಿದರೂ ಅನ್ಯಧರ್ಮವನ್ನು ಆತ ಟೀಕಿಸುವುದಿಲ್ಲ. ಅಲ್ಲಮ ಪ್ರಭುವಿನ ಜೀವನ ವೃತ್ತಾಂತವನ್ನು ಎದುರಿಗೆ ನಡೆಯುತ್ತಿರುವಂತೆ ಕಟ್ಟಿಕೊಡುತ್ತಾನೆ. ಅಲ್ಲಮಪ್ರಭು, ಅಕ್ಕಮಹಾದೇವಿಯವರ ನಡುವಿನ ವಾದ ಧರ್ಮ ಜಿಜ್ಞಾಸೆ ಈ ಕಾವ್ಯದ ವಿಶೇಷವಾಗಿದೆ.

ಸುಮಾರು ೧೫೫೦ರಲ್ಲಿ ಲಕ್ಷ್ಮೀಶ 'ಜೈಮಿನಿ ಭಾರತ'ವನ್ನು ಹಿಂದಿನ ಎಲ್ಲ ನಿಯಮಗಳನ್ನು ಮೀರಿ ಬರೆದನು. ಕತೆಯಲ್ಲಿ ಏಕತೆ ಇಲ್ಲದಿದ್ದರೂ ಭಕ್ತಿ ಅಲ್ಲಿನ ಬಿಡಿ ಕತೆಗಳನ್ನು ಬೆಸೆಯುವ ಕೊಂಡಿಯಾಗಿದೆ. ಹೀಗೆ ಬಿಡಿಕಥೆಗಳನ್ನು ಹೊಸೆದು ಕಾವ್ಯವಾಗಿಸಿದ್ದಾನೆ. ಎಲ್ಲ ಕಥೆಗಳಲ್ಲೂ ಕೃಷ್ಣನೇ ಮುಖ್ಯನಾಗಿದ್ದು ಧರ್ಮರಕ್ಷಣೆ ಅಲ್ಲಿಯ ಮುಖ್ಯ ಅಂಶವಾಗಿ ಉಳಿಯುತ್ತದೆ. ಲಕ್ಷ್ಮೀಶನ ಕಾಲಕ್ಕಾಗಲೇ ಎಲ್ಲ ಧರ್ಮಗಳೂ

ಕಾವ್ಯವನ್ನು ತಮ್ಮ ತಮ್ಮ ಧರ್ಮ ಪ್ರಚಾರಕ್ಕಾಗಿ ಬಳಸಿಕೊಳ್ಳುತ್ತಿದ್ದು ಇದೂ ಅಂತದ್ದೇ ಪ್ರಯೋಗ ಎನ್ನಬಹುದು.

ಈ ಪ್ರಮುಖ ಕವಿಗಳಲ್ಲಿ ಪಂಪ, ರನ್ನರಂತೆ ವೀರಾವೇಶದ ಬಂಡಾಯದ ಧ್ವನಿ ಕಂಡು ಬರುವುದಿಲ್ಲ. ಧರ್ಮ, ವರ್ಗ, ಜಾತೀಯತೆ, ಅಸಮಾನತೆ ಇಂತಹ ವಿಷಯಗಳ ಬಗ್ಗೆ ಮೌನ ವಹಿಸುತ್ತದೆ. ಈ ಮೌನಕ್ಕೆ ಕಾರಣವೇನು?ಅದು ಚರಿತ್ರೆಯ ಮತ್ತೊಂದು ಮುಖವನ್ನು ತೋರುತ್ತಿದೆಯೆ? ಅಂದಿನ ಪ್ರಭುತ್ವ ವ್ಯವಸ್ಥೆ ಆ ವಿಚಾರಗಳ ಬಗ್ಗೆ ಕವಿಗಳ ಮೇಲೆ ನಿಯಂತ್ರಣ ಸಾಧಿಸಿತ್ತೆ? ಅಥವಾ ಸಮಾಜದಲ್ಲಿ ಎಲ್ಲ ರೀತಿಯ ಸಮಾನತೆಯೂ ಇತ್ತೆ? ಎಂಬ ಪ್ರಶ್ನೆಯು ಹಾಗೆಯೇ ಉಳಿದುಹೋಗುತ್ತದೆ. ಸರ್ವಸಮ್ಮತವಾದ ಚರಿತ್ರೆಯೊಂದು ಹೊರಬಿದ್ದಾಗ ಸಾಹಿತ್ಯಿಕವಾದ ಈ ಪ್ರಶ್ನೆಗಳಿಗೂ ಖಚಿತ ಉತ್ತರ ದೊರಕಲು ಸಾಧ್ಯ.

ಅನಂತರದ ಕನ್ನಡ ಸಾಹಿತ್ಯದಲ್ಲಿ ಬಹು ಮುಖ್ಯವಾದ ಮತ್ತೊಂದು ತಿರುವೆಂದರೆ ದಾಸ ಸಾಹಿತ್ಯ 'ಭಕ್ತಿ' ಈ ಕಾಲದ ಧರ್ಮವಾಗಿದ್ದು ಅದೇ ಸಾಹಿತ್ಯವನ್ನು ಬೆಳೆಸಿದೆ ಎನ್ನಬಹುದು. ಮಹಾಕಾವ್ಯಗಳ ಕಾಲ ಆಗಿಹೋಗುತ್ತಾ ಬಂದು ಜನಭಾಷೆಯಲ್ಲಿ ಕಾವ್ಯ ರಚನೆ ಆಗತೊಡಗಿತು. ಕುರ್ತಕೋಟಿಯವರು ಹೇಳುವಂತೆ, "............ ಹಳಗನ್ನಡ ಸಾಹಿತ್ಯ ಬಹುಮಟ್ಟಿಗೆ ಅನುಕರಣದ ದಾರಿಯಲ್ಲಿಯೆ ನಡೆಯಿತು. ಸ್ವಾತಂತ್ರ್ಯವಾದ ಪ್ರತಿಭೆ ಗೋಚರಿಸುವುದೆಂದಲ್ಲ. ಲಕ್ಷ್ಮೀಶ ರಸೋತ್ಕರ್ಷವೊಂದನ್ನೇ ಗುರಿಯಾಗಿಟ್ಟುಕೊಂಡು ಕಾವ್ಯ ರಚನೆಯನ್ನು ಮಾಡಿದ. ದಾಸರ ಹಾಡುಗಳು ಗೇಯ ಕಾವ್ಯದ ಉತ್ತಮ ಮಾದರಿಗಳಾಗಿರುವವಲ್ಲದೆ ವಾದಾತ್ಮಕ ಕವಿತೆ [Argumentative Lyric]ಗಳಿಗೆ ಶ್ರೇಷ್ಠ ಉದಾಹರಣೆಗಳಾಗಿವೆ. ಸರ್ವಜ್ಞನ ಜಾನಪದ ಕಾವ್ಯದ ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡು ಜನರ ನಾಲಿಗೆಗಳಲ್ಲಿ ನಲಿದವು. ಆದರೆ ಒಂದು ಕಾಲಾವಧಿಯ ಜೀವನ ಕ್ರಮ, ಧರ್ಮದೃಷ್ಟಿ, ಒಳಿತು-ಕೆಡಕುಗಳನ್ನು ಯುಗಧರ್ಮದ ಹೊಳಪಿನಲ್ಲಿ ಕಂಡರಿಸಿದ ಕಾವ್ಯ ಮೂಡಿ ಬರಲಿಲ್ಲ. ಕನ್ನಡ ಜನಜೀವನ ಚದುರಿಹೋಗಿತ್ತು. ಧಾರ್ಮಿಕತೆಯಲ್ಲಿ ಮೇಲಿಂದ ಮೇಲೆ ಸಂಘಟನೆಯು ನಡೆದೇ ಇದ್ದರೂ ರಾಜಕೀಯವಾಗಿ ಜೀವನ ಒಂದುಗೂಡಲಿಲ್ಲ. ಮೊದಲಿನಂತೆ ಸಾಮ್ರಾಜ್ಯವಾಗಲೀ, ಜೀವಂತವಾದ ಧರ್ಮವಾಗಲೀ ನಾಡಿನ ಐಕ್ಯವನ್ನು ಸಾಧಿಸಲಿಲ್ಲ. ಮಹಾಕಾವ್ಯವೊಂದರಲ್ಲಿ ಅಭಿವ್ಯಕ್ತಿಗೊಳ್ಳಬಹುದಾದಂತಹ ಜೀವನ ಕ್ರಮವಿರಲಿಲ್ಲ. ವ್ಯಕ್ತಿಗತವಾದ ಭಾವಗೀತಗಳನ್ನು ಬರೆಯುವುದೊಂದೆ ಶಕ್ಯವಾಗಬಹುದಿತ್ತು. ಮತ್ತು ಅದೇ ಮಾದರಿಯ ದಾಸರ ಹಾಡುಗಳು, ಸರ್ವಜ್ಞನ ಹಾಡುಗಳು, ಸರ್ವಜ್ಞನ ತ್ರಿಪದಿಗಳು, ಅನುಭಾವದ ಪದ್ಯಗಳು ಹುಟ್ಟಿಬಂದವು."9 ಈ ಮಾತು ನಿಜವಾದರೂ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವುದು ಇವರ ಭಕ್ತಿಯ ಮತ್ತೊಂದು ಮುಖವಾಯಿತು. ಸುಮಾರು ೧೫೫೦ರಲ್ಲಿ ಜೀವಿಸಿದ್ದ ಪುರಂದರರು ಹಾಗು ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಭಕ್ತಿ ಹಾಗೂ ಮಾನವೀತೆಯ ಶ್ರೇಷ್ಠ ಅಂಶಗಳನ್ನು ಪ್ರತಿಪಾದಿಸುತ್ತಾರೆ. ಸುಮಾರು ಐದುನೂರು ವರ್ಷಗಳ ಕಾಲ ತನ್ನ ಪ್ರಭಾವವನ್ನು ಸಮಾಜದ ಮೇಲೆ ಬೀರಿದ್ದ ವಚನ ಸಾಹಿತ್ಯದಂತೆಯೇ ಇಲ್ಲಿಯೂ ತಮ್ಮತನ್ನವನ್ನು ಉಳಿಸಿಕೊಳ್ಳಲು ಅನೇಕ ರೀತಿಯ ಪ್ರಯತ್ನಗಳು ನಡೆದವು. ಇವರೂ ತಮ್ಮ ಧಾರ್ಮಿಕ ವಿಚಾರಗಳನ್ನು ವಿಡಂಬನೆ ಮಾಡಿದರು. ಆ ಮೂಲಕ ಜನರಲ್ಲಿ

ಜಾಗೃತಿ ಮೂಡಿಸುವುದು. ಇವರ ಮತ್ತೊಂದು ಉದ್ದೇಶವಾಗಿತ್ತು. ಭಕ್ತಿ ಇವರ ಪಾಲಿಗೆ ಭವದ ಕಪಟಗುಣಗಳನ್ನು ತೊಡೆದು ಹಾಕುವ ಸಾಧನವಾಗಿ ಕಂಡು ಬರುತ್ತದೆ.

'ಜಪವ ಮಾಡಿದರೇನು ತಪವ ಮಾಡಿದೇರೇನು?
ಕಪಟಗುಣ ವಿಪರೀತ ಕಲುಷವಿದ್ದವರು '[10]

ಎಂದು ಕನಕದಾಸರು ವಿಡಂಬಿಸಿದ್ದಾರೆ.

'ಆವ ಕುಲವಾದರೇನು
ಆವನಾದರೇನು
ಆತ್ಮಭಾವವರಿತ ಮೇಲೆ'[11]

ಎಂದು ಪುರಂದರರು ಹಾಡುತ್ತಾರೆ.

'ಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರ'[12]

ಎಂದು ಕನಕದಾಸರು ಪ್ರಶ್ನಿಸುತ್ತಾರೆ. ಈ ರೀತಿಯಲ್ಲಿ ಧಾರ್ಮಿಕ ನಂಬಿಕೆಗಳನ್ನು ಪರಿಷ್ಕರಿಸುವ ಅಸಮಾನತೆಯನ್ನು ಕಿತ್ತೊಗೆಯುವ ಪ್ರಯತ್ನದಲ್ಲಿ ತಮ್ಮ ಕಾಲದ ಕಟ್ಟುಪಾಡುಗಳನ್ನು ಮೀರಿ ಕೈಜೋಡಿಸಿದ್ದು ಬಂಡಾಯದ ಒಂದು ಹಂತವಾಗಿದೆ. ಇದಲ್ಲದೆ ಕನಕದಾಸರ 'ರಾಮಧಾನ್ಯ ಚರಿತೆ'ಯಲ್ಲಿ ಕಂಡು ಬರುವ ವರ್ಗ, ವರ್ಣ ತಾರತಮ್ಯಗಳಲ್ಲಿ ರಾಗಿಯೇ ಗೆಲ್ಲುವುದು ಒಂದು ಕ್ರಾಂತಿಕಾರಿ ಆಲೋಚನೆಯೇ ಸರಿ. ಕೀರ್ತನೆಗಳು, ಸುಳಾದಿ, ಉಗಾಭೋಗ ಮುಂತಾದ ರೂಪಗಳಲ್ಲಿ ದಾಸಸಾಹಿತ್ಯ ರೂಪಗೊಂಡಿದೆ. ಮುಂದೆ ೧೭ನೆಯ ಶತಮಾನದಲ್ಲಿ ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಸಂಚಿಯ ಹೊನ್ನಮ್ಮನೆಂಬ ಕವಯಿತ್ರಿ 'ಹದಿಬದೆಯ ಧಮ' ಎಂಬ ಸಾಂಗತ್ಯ ಕಾವ್ಯವನ್ನು ರಚಿಸಿದ್ದಾಳೆ. ವಚನಕಾರ್ತಿಯರಾದ ಮೇಲೆ ರಾಜನ ಊಳಿಗದಲ್ಲಿದ್ದ ಹೆಣ್ಣುಮಗಳೊಬ್ಬಳು ಸಾಂಗತ್ಯದಲ್ಲಿ ಕವಿತೆಯನ್ನು ರಚಿಸಿರುವುದು ಒಂದು ವಿಶಿಷ್ಟ ಸಂಗತಿ. ಮುಖ್ಯವಾಗಿ ಹೆಣ್ಣು ಗಂಡಿನ ನಡುವಿನ ಅಂತರ ಅಸಮಾನತೆಯ ವಿಷಯವಾಗಿ ಈಕೆಯನ್ನು ಕಾವ್ಯದಲ್ಲಿ ದನಿ ಎತ್ತಿದ್ದಾಳೆ. 'ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು' ಎಂದು ತನ್ನ ಅಸಮಾಧಾನವನ್ನು ವ್ಯಕ್ತ ಪಡಿಸುತ್ತಾಳೆ. ಸಂಸಾರದಲ್ಲಿ ಸತಿಪತಿಗಳು ಸಮಾನರು ಎಂಬ ಭಾವನೆ ಆ ಶತಮಾನದಲ್ಲಿ ನಿಜಕ್ಕೂ ದೊಡ್ಡ ಸ್ತ್ರೀ ಸಂವೇದನೆಯಾಗಿದೆ. ಅದನ್ನು ಸ್ತ್ರೀಯಾದ ಹೊನ್ನಮ್ಮ ಹೇಳಿರುವುದು ಮತ್ತಷ್ಟು ಪರಿಣಾಮಕಾರಿಯಾಗಿದೆ. ಹದಿಬದೆಯ ಧರ್ಮ ರಚನೆಯ ಕಾಲದಲ್ಲಿ ಇದ್ದ ಸಾಮಾಜಿಕ ಪರಿಸರದಲ್ಲಿ ಸ್ತ್ರೀ

ಸ್ವಾತಂತ್ರ್ಯ, ಮಾನ್ಯತೆಗಳು ಕಡಿಮೆ ಇದ್ದು ಅದನ್ನು ವಿರೋಧಿಸಿ ಹೊನ್ನಮ್ಮ ಈ ಕಾವ್ಯದಲ್ಲಿ ಮಾತನಾಡುತ್ತಾಳೆ. ಇಂತಹ ವಿಷಯಗಳ ಬಗ್ಗೆ ಆಲೋಚಿಸುವುದೂ ಕಷ್ಟಸಾಧ್ಯವಾಗಿದ್ದ ಕಾಲದಲ್ಲಿ ಅದನ್ನು ಕಾವ್ಯವಾಗಿಸಿದ. ಹೊನ್ನಮ್ಮನಿಗೆ ಕನ್ನಡ ಸಾಹಿತ್ಯ ಲೋಕ ಋಣಿಯಾಗಿದೆ.

ಹೆಚ್ಚು ಕಡಿಮೆ ಇದೇ ಕಾಲದವನಾದ ಸರ್ವಜ್ಞ ಕವಿ (ಸು. ೧೭೦೦) ಕನ್ನಡದ ದೇಸೀ ಮಟ್ಟಿನ ತ್ರಿಪದಿಯಲ್ಲಿ ಸಾವಿರಾರು ಬಿಡಿ (ಪದ್ಯಗಳನ್ನು) ವಚನಗಳನ್ನು ರಚಿಸಿ ಸಮಾಜಕ್ಕೆ ಸಮಾನತೆಯ ಸಂದೇಶವನ್ನು ನೀಡಿದ್ದಾನೆ. ಬಡವ ಬಲ್ಲಿದನೆಂಬ ತಾರತಮ್ಯವನ್ನು ಸರ್ವಜ್ಞ ವಿಡಂಬಿಸುವ ರೀತಿ ವಿಭಿನ್ನವಾದುದು. ಗುಣಕ್ಕೆ ಮಾತ್ಸರ್ಯವೇಕೆ ಎಂಬ ಮಾತನ್ನು ಕಡೆಗಾಣಿಸಿ ಸಾಮಾಜಿಕರು ನಡೆದುಕೊಳ್ಳುವ ರೀತಿಯ ಬಗ್ಗೆ ಅಸಮಧಾನವನ್ನು ವ್ಯಕ್ತಪಡಿಸುತ್ತಾನೆ.

'ಬಡವನೊಂದೊಳುನುಡಿಯ |ನುಡಿದರೆ ನಿಲ್ಲದು
ಕೊಡೆಯ ನೆಳಲಾತ ನುಡಿದರೆ -ನಾಯಕನ
ನುಡಿಯೆಂದು ನಿಲುಹೆ ಸರ್ವಜ್ಞ' [ವಚನ - ೧೫೧೬][13]

ಜನ್ನ ವಿದ್ಯವುಯೆಂದು |ಕನ್ನೆಯಾಡನು ತಿಂದು
ಉನ್ನತ ಸ್ವರ್ಗವಡೆವರೆ -ಹಿಂಡಾಡ
ತಿನ್ನುವನೇ ಕೆಟ್ಟ ಸರ್ವಜ್ಞ [ವಚನ - ೫೩೧][14]

ಈ ಪದ್ಯದಲ್ಲಿ ಪರಧರ್ಮದ ಬಗ್ಗೆ ಜಿಜ್ಞಾಸೆ ಇರುವುದನ್ನು ಕಾಣಬಹುದು. ಮೇಲೆ ಗುರುತಿಸಿದ ಎರಡು ವಚನಗಳು ಉದಾಹರಣೆಗಳಷ್ಟೆ. ಸಮಾಜದ ಎಲ್ಲ ವಿಷಯಗಳ ಬಗ್ಗೆ ಪ್ರಶ್ನಿಸುವ ಸರ್ವಜ್ಞನ ವಚನಗಳಲ್ಲಿ ಬಂಡಾಯದ ಅಂಶಗಳು ದಟ್ಟವಾಗಿ ಕಂಡು ಬರುತ್ತವೆ.

೧೮೦೦ರ ಸುಮಾರಿಗೆ ಸಾಹಿತ್ಯದ ರೂಪಗಳು ಬದಲಾಗ ತೊಡಗಿದವು. ವಿಶೇಷವಾಗಿ ಗದ್ಯ ಸಾಹಿತ್ಯ ಕೃತಿಗಳು ರಚನೆಯಾದವು. ದೇವಚಂದ್ರನ ಗದ್ಯ ಕೃತಿ 'ರಾಜಾವಳೀ ಕಥೆ'ಕೆಂಪು ನಾರಾಯಣನ ಮುದ್ರಾ ಮಂಜೂಷ, ನಂದಳಿಕೆ ಲಕ್ಷ್ಮೀ ನಾರಣಪ್ಪ (ಮುದ್ದಣ) 'ಅದ್ಭುತ ರಾಮಾಯಣ' ಹಾಗೂ 'ರಾಮಾಶ್ವಮೇಧ' ಇವು ೧೯ನೇ ಶತಮಾನದಲ್ಲಿ ರಚನೆಯಾದ ಗದ್ಯಕೃತಿಗಳೆನ್ನಬಹುದು. ಚಂಪು, ಷಟ್ಪದಿ, ಸಾಂಗತ್ಯಗಳಿಗಿಂತ ಭಿನ್ನವಾದ ಸರಳವಾದ ಗದ್ಯ ರಚನೆಗೆ ತೊಡಗಿದ್ದು ಸಾಹಿತ್ಯಿಕವಾಗಿ ದೊಡ್ಡ ಸಾಧನೆಯೇ ಸರಿ. ಆದರೆ ಧಾರ್ಮಿಕ ಭಾವನೆಯ ಬಿಗಿ ಹಿಡಿತದಿಂದ ಪೂರ್ಣಮುಕ್ತರಾಗಿ ಬರೆಯುವುದು ಇವರಿಗೂ ಸಾಧ್ಯವಾಗಲಾರದೇ ಹೋಯಿತು. ಪರಾಣ ಪ್ರಸಿದ್ಧ ವಸ್ತುವೇ ಇಲ್ಲಿಯೂ ಬಳಕೆಯಾಗಿದೆ. ರಾಮಾಶ್ವಮೇಧದಲ್ಲಿ 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂದು ಮನೋರಮೆಯಿಂದ ಹೇಳಿಸಿದ್ದಾನೆ. ಈ ಕೃತಿಯ ತಂತ್ರವೂ ವಿಶೇಷವಾಗಿದೆ. ಮನೋರಮೆ ಓದುಗರ

ಪ್ರತಿನಿಧಿಯಾಗಿದ್ದಾಳೆ. ಅವಳು ಕತೆ ಕೇಳವಂತೆ ಮುದ್ದಣ ಹೇಳುವಂತೆಯೂ ಇದರಲ್ಲಿ ವ್ಯಕ್ತವಾಗುತ್ತದೆ.

ತಾನು ಅನುಸರಿಸಿದ ಗದ್ಯಶೈಲಿಯನ್ನು ಸಮರ್ಥಿಸಿಕೊಳ್ಳುತ್ತಾ 'ಕರ್ಮಣಿಸರದೊಳ್ ಬೆಂಬವಳಮಂ ಕೋದಂತಿರೆ ರಸಮೊಸರೆ ಲಕ್ಕಣಂ ಮಿಕ್ಕಿರೆ ಎಡೆಎಡೆಯೊಳ್ ಸತ್ಕದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳ ಕತೆಯನುಸಿರ್ವೆಂ' ಎಂದು ಅಚ್ಚಕನ್ನಡ ಪರವಾದ ಮಾತುಗಳನ್ನು ಆಡಿದ್ದಾನೆ. ಎಸ್. ವಿ. ರಂಗಣ್ಣನವರು ತಮ್ಮ ಲೇಖನವೊಂದರಲ್ಲಿ 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು'[14] ಎಂದು ಬಣ್ಣಿಸುತ್ತಾರೆ.

ಇದುವರೆವಿಗಿನ ಸಾಹಿತ್ಯವೆಲ್ಲವೂ ಕಾಲಾನುಕಾಲಕ್ಕೆ ಒಂದಕ್ಕೊಂದು ಪೂರಕವಾಗಿಯೂ, ಹಿಂದಿನ ಸಾಹಿತ್ಯದ ಶೈಲಿ, ನಿರೂಪಣೆ, ವಸ್ತುಗಳನ್ನು ಪ್ರಶ್ನಿಸುವಂತೆಯೂ ಬೆಳೆದುಬಂದಿದೆ. ಇದು ಧಾರ್ಮಿಕ, ರಾಜಕೀಯ ಕಾರಣಗಳಿಂದ ಪ್ರೇರಿತವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಪ್ರಾರಂಭದ ಹಂತದಲ್ಲಿ ಜೈನ ಧರ್ಮದ ಪ್ರಭಾವವಿದ್ದು ಆ ನಂತರ ವೀರಶೈವದ ಪ್ರಭಾವವಿದೆ. ಶಂಕರ, ರಾಮಾನುಜ ಮುಂತಾದವರ ಪ್ರಭಾವವು ಸಾಹಿತ್ಯದ ಮೇಲೆ ಆಗಿದೆ. ಬೇರೆ ಬೇರೆ ಧರ್ಮದ ಪ್ರಭಾವವಾಗುತ್ತಿದ್ದಂತೆ ಅವುಗಳ ಮೂಲ ಭಾಷೆಯು ಕನ್ನಡಕ್ಕೆ ಸೇರಿ ಹೊಸ ಲಕ್ಷಣವನ್ನು ಕನ್ನಡಕ್ಕೆ ತಂದುಕೊಟ್ಟವು. ಶೈಲಿ, ಛಂದಸ್ಸು, ನಿರೂಪಣೆ, ತಂತ್ರ, ವಸ್ತು ಇವುಗಳು ನಿರಂತರವಾಗಿ ಬದಲಾಗುತ್ತ ಬಂದಿತು.

ಇವುಗಳಲ್ಲಿ ದೇಸೀಯತೆಗೆ ಪ್ರಾಮುಖ್ಯವಿತ್ತ ವಚನ ಚಳವಳಿಯ ಶೈಲಿ ವಿಶಿಷ್ಟವಾದದ್ದು. ಹಾಗೆಯೇ ರಗಳೆಗಳು, ಷಟ್ಪದಿ, ಸಾಂಗತ್ಯ, ತ್ರಿಪದಿ ಮುಂತಾದ ಕನ್ನಡದ ಛಂದಸ್ಸುಗಳು ಇಲ್ಲಿ ಪ್ರಾಮುಖ್ಯತೆ ಪಡೆದಿವೆ. ರಾಮಾಯಣ, ಭಾರತಗಳ, ಪುರಾಣಗಳ ಕಥೆಯನ್ನು ಹೊರತುಪಡಿಸಿ, ಕುಮಾರ ರಾಮನ ಕಥೆ, ಕರ್ನಾಟಕ ಕಾದಂಬರಿ, ರಾಮಧಾನ್ಯ ಚರಿತೆ, ಪ್ರಭುಲಿಂಗಲೀಲೆ ಮುಂತಾದ ಕಾವ್ಯದ ಅಂಶಗಳು ಜನಪರ ಲೌಕಿಕ ದೃಷ್ಟಿಯಿಂದ ಹುಟ್ಟಿ ಬಂದವುಗಳಾಗಿವೆ. ೨೦ನೇ ಶತಮಾನದ ಹಿಂದಿನ ಸಾಹಿತ್ಯದಲ್ಲಿ ಮುಖ್ಯವಾಗಿ ಜ್ಞಾನ, ಭಕ್ತಿ, ಕರ್ಮ ಈ ಮೂರು ಮಾರ್ಗಗಳೂ ಜನಪರವಾಗಿ ಸ್ಪಂದಿಸುವಲ್ಲಿ ತಕ್ಕಮಟ್ಟಿನ ಒಲವನ್ನು ತೋರಿದೆ ಎನ್ನಬಹುದು. ಆದರೆ ಅಹಲ್ಯೆ, ಸೀತೆ, ದ್ರೌಪದಿ ಇಂತಹ ಕೆಲವು ಸ್ತ್ರೀ ಪಾತ್ರಗಳನ್ನು ಬಿಟ್ಟರೆ ಕಾವ್ಯಗಳಲ್ಲಿ ಸ್ತ್ರೀಗೆ ಹೆಚ್ಚಿನ ಸ್ಥಾನಮಾನ ನೀಡುವಲ್ಲಿ ವಿಫಲವಾಗುತ್ತವೆ. ಕೆಲವು ವಚನಕಾರ್ತಿಯರನ್ನು ಹೊರತುಪಡಿಸಿದರೆ ತೀರ ವಿರಳವಾಗಿ ಒಂದಿಬ್ಬರು ಮಾತ್ರ ಕವಯಿತ್ರಿಯರು ಬೆಳಕಿಗೆ ಬಂದಿದ್ದಾರಷ್ಟೆ.

ಇಷ್ಟನ್ನು ಬಿಟ್ಟರೆ, ಕವಿರಾಜಮಾರ್ಗಕಾರ ಹೇಳಿದಂತೆ,

ಪಾಪಮಿದು ಪುಣ್ಯಮಿದು ಹಿತ |
ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ
ಖೋಪಾತ್ತವಿದೆಂದಱೆ ಪುಗು|
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ||

ಎನ್ನುವ ಸಾಲುಗಳನ್ನೇ ಬಹುತೇಕ ಕಾವ್ಯಗಳು ಪ್ರತಿಧ್ವನಿಸುತ್ತವೆ. ಒಟ್ಟಾರೆ ಆಧುನಿಕತೆಗೆ ಸದಾ ತುಡಿಯುತ್ತಿದೆ.

ಸದಾ ಪರಿವರ್ತನ ಶೀಲವಾದ ಸಮಾಜದಲ್ಲಿ ಹೊಸತನಕ್ಕೆ ಆದ್ಯತೆ ಹೆಚ್ಚಾದಂತೆ, ಹೊಸದನ್ನು ಮಾಡಬೇಕು, ನೀಡಬೇಕು ಎಂಬ ಹಂಬಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿಯೂ ಅನೇಕ ಮಾರ್ಪಾಡುಗಳಾದವು. ಇದೀಗ ಸಾಹಿತ್ಯ ಹೊಸ ಹೊಸ ಉಡುಗೆಯಲ್ಲಿ ಅಭಿವ್ಯಕ್ತವಾಗತೊಡಗಿತು. ತನ್ನ ಸಮಾಜವನ್ನು ಮುನ್ನಡೆಸುವ ಪ್ರಬಲ ಶಕ್ತಿ ಸಾಹಿತ್ಯಕ್ಕೆ ಬಂದದ್ದೇ ೨೦ನೇ ಶತಮಾನದಲ್ಲಿ ಎನ್ನಬಹುದು. ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಜನಪರವಾದ ಆಲೋಚನೆಗಳು ಈ ಶತಮಾನದ ಆರಂಭದ ಘಟ್ಟದಿಂದಲೇ ಕಾಣಿಸಿಕೊಳ್ಳತೊಡಗಿದವು. ಈ ಹಿಂದಿನವರು ರಾಮಾಯಣ, ಭಾರತ, ಪುರಾಣಗಳ ಕಥೆಗಳನ್ನು ಜನಪರ ಲೌಕಿಕ ದೃಷ್ಟಿಯಿಂದ ರಚಿಸಿದರೆ, ಈಗ ನೇರವಾಗಿ ಸಮಾಜದ ಒಳದನಿ ಕಾವ್ಯದಲ್ಲಿ ವ್ಯಕ್ತವಾಗುತ್ತಾ ಹೋಯಿತು. ಅದಕ್ಕೆ ಹತ್ತಾರು ಮಾರ್ಗಗಳನ್ನು ಹುಡುಕಿಕೊಂಡಿತು. ಕವನ, ನಾಟಕ, ಕಾದಂಬರಿ, ಸಣ್ಣಕತೆ, ಮಹಾಕಾವ್ಯ ಹೀಗೆ ಸೃಜನಶೀಲ ಸಾಹಿತ್ಯದಲ್ಲಿ ಹೊಸ ಹೊಸ ಪ್ರಕಾರಗಳು ಕಂಡುಬಂದರೆ, ವಿಮರ್ಶೆ, ಜಿಜ್ಞಾಸೆ, ಮೀಮಾಂಸೆಗಳಲ್ಲಿಯೂ ಆ ಜನಪರವಾದ ನಿಲುವುಗಳು ದಟ್ಟವಾಗಿ ಕಾಣತೊಡಗಿದವು. ಸಾಮಾಜಿಕ ಸಂದರ್ಭ ಹಾಗೂ ಸಾಹಿತ್ಯರಚನೆ ಇಲ್ಲಿ ಒಂದಕ್ಕೊಂದು ಪೂರಕವಾಗಿ ಬೆಳೆದವು. ಕನ್ನಡ ಸಾಹಿತ್ಯ ರಚನೆಗೆ ಬೇರೊಂದು ಭಾಷೆಯ ಸಾಹಿತ್ಯವೂ ಪೂರಕವಾದವು. ಹೀಗೆ ಬೇರೆ ದೇಶ, ಭಾಷೆ, ಸಂಸ್ಕೃತಿಗಳ ನಡುವೆ ತನ್ನತನವನ್ನು ಉಳಿಸಿಕೊಳ್ಳಲು ದೊಡ್ಡಮಟ್ಟದ ಪ್ರಯತ್ನವೇ ನಡೆಯಿತು. ಜಾಗತೀಕರಣದ ಸಂದರ್ಭದಲ್ಲಿ ಅದರ ಜವಾಬ್ದಾರಿ ಮತ್ತಷ್ಟು ಹೆಚ್ಚಿತು. ಇಂತೆಲ್ಲಾ ಪೂರಕ, ಬಾಧಕಗಳು ಸಾಹಿತ್ಯ ರಚನೆಯ ಮೇಲೆ ತಮ್ಮ ಪ್ರಭಾವವನ್ನು ಬೀರಿದೆ.

ಇವುಗಳೆಲ್ಲದರ ನಡುವೆ ಹೊಸ ಹೊಸ ಶೈಲಿಯಲ್ಲಿ ಜನಪರವಾಗಿಯೂ, ದೇಸೀಯವಾಗಿಯೂ ಸಾಹಿತ್ಯ ಬೆಳೆಯುವ ವಿಧಾನದಲ್ಲಿ ಬಂಡಾಯದ ಗುಣಗಳನ್ನು ಗುರುತಿಸಬಹುದು. ೧೯೨೨ರಲ್ಲಿ ರಚನೆಯಾದ 'ಇಂಗ್ಲೀಷ್ ಗೀತೆಗಳು'ನವೋದಯ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿ ಸುಮಾರು ೩೦ ವರ್ಷಗಳ ಕಾಲ ತನ್ನ ಪ್ರಭಾವವನ್ನು ಬೀರಿತು. ಹೊಸ ಪ್ರಕಾರದ ಸಾಹಿತ್ಯ ನಿರ್ಮಿತಿಗೆ ವಿದೇಶಿ ಕಾವ್ಯದ ಕಲ್ಪನೆಗಳು ಪ್ರಭಾವ ಬೀರಿದೆ ಎನ್ನಬಹುದು. ಬಿ.ಎಂ. ಶ್ರೀ. ಯವರ ಇಂಗ್ಲೀಷ್ ಗೀತಗಳಿಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಇರುವಂತೆಯೇ ಭಾರತೀಯವೆನಿಸುವ ಅನೇಕ ಅಂಶಗಳು ಪ್ರೇರಣೆಯಾಗಿದೆ. ಈ ಹಿಂದಿನಂತೆಯೇ ಕಾವ್ಯಪ್ರಕಾರಗಳಾದ ತ್ರಿಪದಿ, ರಗಳೆ, ಸಾಂಗತ್ಯ, ವಚನ, ಕೀರ್ತನೆ ಮುಂತಾದವು ಹೊಸ ಸಾಹಿತ್ಯ ಪ್ರಕಾರವನ್ನು ಹುಡುಕಿಕೊಳ್ಳಲು ಪ್ರಚೋದಿಸಿತು. ಹಾಗೆಯೇ ಅಂದಿನ ಸಾಮಾಜಿಕ ಪರಿಸರ ಕೂಡ ಸಾಹಿತ್ಯಕ್ಕೆ ಹೊಸ ವಸ್ತುವನ್ನು ತಂದು ಕೊಟ್ಟವು. ಸ್ವಾತಂತ್ರ್ಯ ಚಳವಳಿ, ವಿದೇಶಿ ಆಡಳಿತ ಆರ್ಥಿಕ ಪರಿಸ್ಥಿತಿ ಇವೆಲ್ಲವುಗಳಿಂದ ರೂಪುಗೊಂಡ ಸ್ವತಂತ್ರ್ಯಪೂರ್ವ ಭಾರತದ ಸಮಾಜ ನವೋದಯ ಸಾಹಿತ್ಯದ ಮುಖ್ಯ ಅಂಶವಾಯಿತು. ಶೈಲಿಯ ವಿಚಾರದಲ್ಲಿ ಹಿಂದಿನ ಪ್ರಾಚೀನ ಸಾಹಿತ್ಯದ ಪ್ರಭಾವ ಹೆಚ್ಚಾಗಿರುವುದನ್ನು ಕಾಣಬಹುದು. ಡಿ. ಆರ್. ನಾಗರಾಜ್‌ರವರ

ಪ್ರಕಾರ "ವಸಾಹತುಶಾಹೀ ಆಗಮನಕ್ಕೆ ಉಂಟಾದ ಪ್ರಕ್ರಿಯೆಗಳೇ ಕನ್ನಡ ನವೋದಯದ ಮೂಲ ಕಾರಣ"[15]. ಅಂತಹ ಕೆಲವು ಕೃತಿಕಾರರ ಸಾಹಿತ್ಯವನ್ನು ಗಮನಿಸೋಣ.

ಪ್ರತಿಯೊಬ್ಬ ಸಾಹಿತಿಯೂ ಸಮಾಜದಿಂದ ಅನೇಕ ಅನುಭವಗಳನ್ನು ಪಡೆದಿರುತ್ತಾನೆ. ಹಾಗೂ ಸಮಾಜದಲ್ಲಿ ಪರಿವರ್ತನೆಯನ್ನು ತರಲು ಹಂಬಲಿಸುತ್ತಾನೆ.

ಇಂತಹ ಪ್ರಯೋಗಗಳಲ್ಲಿ ಸಮಾಜದಲ್ಲಿನ ಅನ್ಯಾಯಗಳನ್ನು ಖಂಡಿಸುತ್ತಾರೆ. ಕುವೆಂಪುರವರ ಅನೇಕ ಕವನಗಳು ಇಂತಹ ಧ್ವನಿಯನ್ನು ಹೊಂದಿದೆ.

ಕರಿಯರದೊ ಬಿಳಿಯರದೊ ಯಾರಾದರೆ ಏನು?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ!
ವಿಜಯನಗರವೋ? ಮೊಗಲ್ಸರಾಳಿಕೆಯೋ? ಇಂಗ್ಲಿಷರೋ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ!
ಕತ್ತಿ ಪರದೇಶಿಯಾದರೆ ಮಾತ್ರ ನೋವೆ?
ನಮ್ಮವರೆ ಹದ ಹಾಕಿ ತಿವಿದರದು ಹೂವೆ?.........
.........................................................
ಸಾಮ್ರಾಜ್ಯ ಶೂರ್ಪನಖಿ ಮೋಹಿನಿಯ ರೂಪಕ್ಕೆ !
ಮರುಳಾಗೆನೆಂದಿಗೂ, ಸೀತೆ ಮೇಲಾಣೆ|
ಬಡತನದ ಗೊಬ್ಬರವನನುದಿನಂ ಹೀರಿ
ಹಿಡಿಸದೋ ಸಾಮಾಜ್ರ್ಯ ಸಿರಿಯ ಕಸ್ತೂರಿ![16]

ಈ ಕವನದಲ್ಲಿ ರೈತನ ನೋವು ಚಿತ್ರಿತವಾಗಿದೆ. ಆ ಮೂಲಕ ಕುವೆಂಪುರವರು ರೈತರ ಎಂದರೆ ಶ್ರಮಜೀವಿಗಳ ಪರವಾಗಿ ಮಾತನ್ನಾಡುತ್ತಾರೆ. ರೈತನ ಪರಿಸ್ಥಿತಿ ಯಾವ ಕಾಲಕ್ಕೂ ಕಷ್ಟಕರವಾದದ್ದು. ಅದಕ್ಕೆ ಬಹುಪಾಲು ಕಾರಣ ಆಡಳಿತ ವ್ಯವಸ್ಥೆ. ಅದರ ಮುಕ್ತಿಗಾಗಿ ಒಂದು ಸಣ್ಣ ದನಿ ಎತ್ತುತ್ತಾರೆ. ಹಾಗೆಯೇ ಅವರ 'ಇಂದಿನ ದೇವರು'ಕವನದ ಸಾಲುಗಳು ಪುರೋಹಿತಶಾಹಿಯ ಕೆಲವು ದುರಾಚರಣೆಗಳನ್ನು ಪ್ರತ್ಯಕ್ಷವಾಗಿ ವಿರೋಧಿಸುತ್ತಾರೆ.

"ನೂರು ದೇವರನೆಲ್ಲಾ ನೂಕಾಚೆ ದೂರ, ಭಾರತಾಂಬೆಯೆ ದೇವಿ ನಮಗಿಂದು
ಪೂಜಿಸುವ ಬಾರ|" ಎಂದು ಭಾರತೀಯರೆಲ್ಲಾ ಒಂದೇ ಭಾರತಾಂಬೆಯೇ ನಮ್ಮ ದೇವಿ ಎಂಬ ಕಲ್ಪನೆಯನ್ನು ಮೂಡಿಸುತ್ತಾರೆ. ಈ ಕವನಕ್ಕೆ ರಾಷ್ಟ್ರೀಯತೆಯ ಕಲ್ಪನೆ ಇರುವಂತೆಯೇ ಸನಾತನ ಧರ್ಮದ ಮೂಢ ಆಚರಣೆಗಳ

ಬಗ್ಗೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸುತ್ತದೆ. ಅವರ 'ಜಲಗಾರ', 'ಶೂದ್ರತಪಸ್ವಿ' ಮುಂತಾದ ನಾಟಕಗಳಲ್ಲಿಯೂ ಜಾತಿ ವ್ಯವಸ್ಥೆ, ವರ್ಗ ವೈಷಮ್ಯ ಮುಂತಾದವುಗಳನ್ನು ಖಂಡಿಸುತ್ತಾರೆ. ಯಾವ ವೃತ್ತಿಯೂ ಕೀಳಲ್ಲ ಎಂಬ ಭಾವನೆಯನ್ನು ಬಿತ್ತುತ್ತದೆ. "ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು " ಎಂದು ಘೋಷಿಸುತ್ತಾರೆ.

ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿಯೂ ಕುವೆಂಪು ಅವರು ಛಂದಸ್ಸಿನ ವಿಚಾರದಲ್ಲಿ ಹಿಂದೆ ಇದ್ದ ನಿಯಮಗಳನ್ನು ಮೀರುವಲ್ಲಿ ಯಶಸ್ವಿಯಾಗುತ್ತಾರೆ. ಹಾಗೆಯೇ ಅದರಲ್ಲಿಯ ಸ್ತ್ರೀ ಪುರುಷ ಸಮಾನತೆಯ ಅಂಶಗಳು ಮುಖ್ಯವಾಗಿದೆ. ಊರ್ಮಿಳೆ, ಸೀತೆ ಮುಂತಾದ ಸ್ತ್ರೀ ಪಾತ್ರಗಳಲ್ಲಿ ಅದು ಕಂಡು ಬರುತ್ತದೆ. ರಾಮನೂ ಸೀತೆಯಂತೆ ಅಗ್ನಿ ಪ್ರವೇಶಿಸುವ ಸನ್ನಿವೇಶವನ್ನು ಸೃಷ್ಟಿಸಿ, ಸಮಾನತೆಯನ್ನು ಪ್ರತಿಪಾದಿಸುತ್ತಾರೆ. ಅವರ ಕಾದಂಬರಿಗಳ ರಚನೆಯ ಕಾಲಕ್ಕೆ ಇದ್ದ ರಾಷ್ಟ್ರೀಯ ಆಂದೋಲನದ ವಿವಿಧ ಆಯಾಮಗಳಿಂದ ಅವುಗಳಲ್ಲಿ ಅನೇಕ ಜನಪರ ಕಾಳಜಿ ಇರುವುದನ್ನು ಗಮನಿಸಬಹುದು. ಹೀಗೆ ಕುವೆಂಪು ಸಾಹಿತ್ಯದಲ್ಲಿ ಅನೇಕ ಜನಪರ ಬಂಡಾಯ ಇರುವುದನ್ನು ಗುರುತಿಸಬಹುದು.

ಇದೇ ಕಾಲಘಟ್ಟದ ಮತ್ತೊಬ್ಬ ಪ್ರಸಿದ್ಧ ಕಾದಂಬರಿಕಾರರಾದ ಕಾರಂತರ ಕಾದಂಬರಿಗಳಲ್ಲಿ ಇಂತಹ ಜನಪ ದೃಷ್ಟಿಯನ್ನು ಕಾಣಬಹುದು. ಊಳಿಗಮಾನ್ಯ ಪದ್ಧತಿ ಹಾಗೂ ಧಾರ್ಮಿಕತೆಯ ಹಿಡಿತದಿಂದಾಗಿ ದುರಂತ ಜೀವನ ನಡೆಸುವ ಕುಟುಂಬವೊಂದರ ಚಿತ್ರಣವನ್ನು ಅವರ 'ಚೋಮನದುಡಿ'ಯಲ್ಲಿ ಕಾಣಬಹುದು. ಊರಲ್ಲಿ ಜಾತ್ರೆಯಾದರೂ ಮನೆಯಲ್ಲಿ ತಿನ್ನಲು ಒಂದು ತುತ್ತು ಅನ್ನವಿಲ್ಲದ ಬಡತನ ಚೋಮನದು. ಅಂತಹ ಸ್ಥಿತಿಯಲ್ಲಿಯೂ ತಾನು ಬೇಸಾಯಗಾರನಾಗುವ ಹೆಬ್ಬಯಕೆಯನ್ನು ಅವನು ಬಿಡುವುದಿಲ್ಲ. ಅದು ಸಾಧ್ಯವಾಗದೇ ಹೋದಾಗ ಧಣಿಗಳ ಮೇಲಿನ ಕೋಪವನ್ನು ತಾನೇ ಸಾಕಿದ ತನ್ನ ಎತ್ತುಗಳ ಕಾಲು ಮುರಿಯುವುದರ ಮೂಲಕ ತೀರಿಸಿಕೊಳ್ಳುತ್ತಾನೆ. ಎಂದರೆ ಚೋಮನ ಬಂಡಾಯ, ಅಸಮಾಧಾನಗಳು ಬಂಡವಾಳಶಾಹಿಯಾದ ಅವನ ಧಣಿಯನ್ನು ತಾಕುವುದೇ ಇಲ್ಲ. ಅದರ ಪರಿಣಾಮ ಧಣಿಯ ಮೇಲೆ ಬೀರುವುದಿಲ್ಲ. ಆದರೂ ಸಾಮಾಜಿಕವಾಗಿ ನೋಡಿದರೆ ಅಂತಹ ಕಾದಂಬರಿಯ ರಚನೆ ಒಂದು ದುರ್ಬಲ ಜನ ಸಮೂಹದ ಪರವಾದ ನಿಲುವನ್ನು ಹೊಂದಿದೆ ಎನ್ನಬಹುದು. ಇವರ ಮತ್ತೊಂದು ಕಾದಂಬರಿಯಾದ 'ಮರಳಿ ಮಣ್ಣಿಗೆ'ಯಲ್ಲಿಯೂ 'ಬೆಟ್ಟದ ಜೀವ'ದಲ್ಲಿಯೂ ಗಾಂಧೀವಾದದ ಅನೇಕ ಅಂಶಗಳು ಸೇರಿ ಹೋಗಿದೆ. ಪಾತ್ರಗಳನ್ನೇ ಕೇಂದ್ರವಾಗಿಟ್ಟುಕೊಂಡು ಬೆಳೆಯುವ ಇವರ ಕಾದಂಬರಿಯ ಬಗ್ಗೆ ಯು. ಆರ್. ಅನಂತಮೂರ್ತಿಯವರು "ಕಾರಂತರ ಬ್ರಾಹ್ಮಣ ಪಾತ್ರಗಳು ಆ ವರ್ಗದ ಎಲ್ಲರಿಗೂ ಸಾಮಾನ್ಯವಾದ ಲಕ್ಷಣಗಳನ್ನು ಪಡೆದವನಾಗಿ ಪ್ರಾತಿನಿಧಿಕವಾದರೆ, ಚೋಮ ಮಾತ್ರ ಅಸಾಧಾರಣ ಭಾವ ತುಮುಲಗಳನ್ನು ಪಡೆದ, ನಾನು ಆಗ ಕಂಡ ಯಾವ ಅಸ್ಪೃಶ್ಯನಂತೆಯೂ ಇಲ್ಲದ, ಅಸಾಮಾನ್ಯನಾದ್ದರಿಂದಲೆ ಪಂಚಮರೆಲ್ಲರಲ್ಲಿ ಸುಪ್ತವಾದದ್ದನ್ನು ಪ್ರತಿನಿಧಿಸಬಲ್ಲ ಪಾತ್ರವಾಗುತ್ತಾನೆ......"[17] ಎನ್ನುತ್ತಾರೆ. ಚೋಮ ಆ ಸಮಾಜದ ಅಸಾಮಾನ್ಯ ಪಾತ್ರವಾದರೂ ಹೊರ ಜಗತ್ತಿನ ಆ ವರ್ಗದ ಎಲ್ಲ ತರದ ನೋವುಗಳನ್ನು ಪರೋಕ್ಷವಾಗಿ ವಿಡಂಬಿಸುತ್ತಾನೆ, ವಿರೋಧಿಸುತ್ತಾನೆ.

ಜಿ.ಪಿ. ರಾಜರತ್ನಂ (೧೯೦೮-೧೯೭೯) ಅವರ 'ಬಡವನ್ ದೇವ್ರು' ಕವನದಲ್ಲಿ

ಸಾವಿರ್ ಜನಕೆ ಸಾವಿರ್ ದೇವ್ರು|
ಬಡವನ್ ದೇವ್ರು ವೊಟ್ಟೆ|
ದುಡ್ಡಿನ್ ಡಬ್ಬಿ|ಯೋಳಾದ್ ಕೇಳು|
ಸತ್ಯಕ್ ನಾ ಬಾಯ್ ಕೊಟ್ಟೆ
.........................................
.........................................
ಬಡವನ್ ದೇವ್ರಗೆ ಕೆಣಕ್ಲೆಬಾರ್ದು
ನೀ ಕಂಡಿಲ್ ಅದರ ಯೇಟ |
ಬಡವನ್ ದೇವ್ರು ಲೋಕಾನ್ ನುಂಗೋ
ಜೋಲಾಮುಕಿ | ಬೇಟ |[18]

ಎಂದು ವರ್ಗಸಮಾಜದ ವೈಪರೀತ್ಯಗಳನ್ನು ಬಿಂಬಿಸಿದ್ದಾರೆ. ಇದೇ ಧ್ವನಿಯು ಬೇಂದ್ರೆಯವರ 'ತುತ್ತಿನ ಚೀಲ' ಕವನದಲ್ಲಿಯೂ ಕಂಡು ಬರುತ್ತದೆ. ಈ ಪದ್ಯದ ಕೊನೆಯ ಸಾಲುಗಳು ಇಂತಿವೆ.

ದೇವರದೊಂದು
ಗೋರಿಯ ಕಟ್ಟಿ
ಧರ್ಮದ ಧೂಪಕೆ
ಬೆಂಕಿಯನಿಕ್ಕಿ
..................
......................
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು [19]

ಇಲ್ಲಿ ಬದುಕಿಗೆ ಅನಿವಾರ್ಯವಾದ ಆಹಾರವನ್ನು ಪಡೆಯುವುದು ಬಡವನ ಪಾಲಿಗೆ ಬಂಡಾಯವೇ ಆಗಿ ಚಿತ್ರಣಗೊಂಡಿದೆ. ಹಾಗೆಯೇ ಬಂಡವಾಳಶಾಹಿಗಳ ವಿರುದ್ಧವಾಗಿ 'ಕುರುಡು ಕಾಂಚಾಣ'ದಲ್ಲಿ ದನಿ ಎತ್ತುತ್ತಾರೆ.

ಪು.ತಿ.ನ.ರವರ ಕಾವ್ಯದ ಬಹುಭಾಗ ಭಕ್ತಿಪ್ರಧಾನವಾಗಿದ್ದು ಅವರ ಕಾವ್ಯರಚನೆಯ ಶೈಲಿಯಲ್ಲಿ ಹಲವು ಪ್ರಯೋಗಗಳನ್ನು ಮಾಡಿದರು. ಕಾವ್ಯ, ಪ್ರಬಂಧ, ಕತೆ, ಗೀತನಾಟಕ, ವಿಮರ್ಶೆ, ಅನುವಾದ ಹೀಗೆ ಅನೇಕ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದಾರೆ. ಗೀತ ನಾಟಕಗಳ ಪ್ರಯೋಗದಿಂದ ಕನ್ನಡಕ್ಕೆ ಹೊಸ ಕಾವ್ಯ ರಚನೆಯ ಸಾಧ್ಯತೆಯನ್ನು ತಂದು ಕೊಟ್ಟರು.

ನಾಟಕಕಾರರಾಗಿ ಕನ್ನಡ ರಂಗಭೂಮಿಗೆ ಹೊಸ ತಿರುವು ಕೊಟ್ಟ ಟಿ.ಪಿ. ಕೈಲಾಸಂರವರು ನವಿರಾದ ಹಾಸ್ಯವನ್ನು ಬಳಸಿಕೊಂಡು ಸಮಾಜವನ್ನು ವಿಡಂಬಿಸುವ ವಿಧಾನವನ್ನು ಕಂಡು ಕೊಂಡರು. ವಿಚಾರಶಕ್ತಿಯನ್ನು ಪ್ರೇಕ್ಷಕರಲ್ಲಿ ಬೆಳೆಸಿದರು. ಸಾಮಾಜಿಕ ಆಂದೋಲನಗಳ ಪರವಾಗಿ 'ಬಹಿಷ್ಕಾರ', 'ಸೂಳೆ' ಮುಂತಾದ ನಾಟಕಗಳನ್ನು ರಚಿಸಿದರು.

ಕೊಡಗಿನ ಗೌರಮ್ಮ, ತ್ರಿವೇಣಿ ಮುಂತಾದವರ ಕೃತಿಗಳಲ್ಲಿ ಸಾಧಾರಣವಾಗಿ ಮಹಿಳೆಯ ಅಂತ್ರವಾದ ಬದುಕಿನ ಚಿತ್ರಣ ನಮಗೆ ದೊರಕುತ್ತದೆ. ಆ ಕಾಲಘಟ್ಟದ ಸಾಮಾಜಿಕ ಸನ್ನಿವೇಶಗಳು ಇದಕ್ಕೆ ಪ್ರೇರಣೆ ಆಗಿರುವಂತೆ ಅದರಿಂದ ಹೊರಬರುವ ಮಾರ್ಗಗಳನ್ನು ಹುಡುಕುತ್ತವೆ. ಬಂಡಾಯ ಎಂಬ ಸಾಮಾಜಿಕ ಹೋರಾಟದಂತೆ ಇದು ಎಲ್ಲಿಯೂ ಮಾತನಾಡುವುದಿಲ್ಲ. ಆ ಆಯಾಮದಿಂದ ಹೊರಗುಳಿಯುತ್ತದೆ.

ರಾವ್ ಬಹದ್ದೂರರ ಗ್ರಾಮಾಯಣ ಕಾದಂಬರಿಯಲ್ಲಿ ಊಳಿಗಮಾನ್ಯ ಪದ್ಧತಿಯ ವಿರುದ್ಧವಾದ ಅಂಶಗಳನ್ನು ದಾಖಲಿಸಿದ್ದಾರೆ. ಕನ್ನಡ ನವೋದಯದ ಸಾಹಿತ್ಯದ ಮತ್ತೊಬ್ಬ ಕವಿಯಾದ ಎನ್. ಎಸ್. ಲಕ್ಷ್ಮೀನಾರಣ ಭಟ್ಟರ 'ಬೆರೆಯದ ವಾಣಿಗಳು' ಕವನದ ಸಾಲುಗಳು ಮಾನವರ ನಡುವಿನ ಅಂತರಗಳನ್ನು ತೊಡೆದು ಹಾಕಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತದೆ.

'ಜೀವ ಜೀವಗಳ ನಡುವೆ ಎದ್ದ
ಗೋಡೆಗಳ ಪಾಯ ಬಿರಿದು
ಉರುಳಿ ನೆಲಕೆ ತಡೆ ; ತೊಲಗಲಿ ಅಂತರ
ತರತಮ ನೀತಿಗಳು '[20]

ಜನತೆಯ ಮನೋವಿಕಾಸವನ್ನೇ ಮುಖ್ಯ ಅಂಶವಾಗಿ ಪರಿಗಣಿಸಿದ ಪ್ರಗತಿಶೀಲ ಸಾಹಿತ್ಯವು ೧೯೪೫ರ ಸುಮಾರಿಗೆ ರೂಪುಗೊಳ್ಳಲಾರಂಭಿಸಿತು. ಪ್ರಗತಿಶೀಲರಲ್ಲಿ ಅ.ನ.ಕೃ. ಪ್ರಮುಖರಾದವರು. ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ ಮುಂತಾದವರನ್ನು ಇಲ್ಲಿ ಹೆಸರಿಸಬಹುದು. ಸಣ್ಣಕತೆ ಮತ್ತು ಕಾದಂಬರಿ ಈ ಕಾಲಘಟ್ಟದಲ್ಲಿ ಮುಖ್ಯವಾದವು. ನಿರಂಜನರ ಪ್ರಸಿದ್ಧ ಸಣ್ಣಕತೆಯಾದ 'ಕೊನೆಯ ಗಿರಾಕಿ'ಯಲ್ಲಿ ಸಮಾಜ

ಒಂದು ದುರ್ಬಲ ಹೆಣ್ಣನ್ನು ಹೀನವಾಗಿ ನಡೆಸಿಕೊಳ್ಳುವ ಚಿತ್ರಣವಿದ್ದು ಸಮಾಜದ ಕ್ರೂರ ವಾಸ್ತವತೆಯನ್ನು ಬಿಂಬಿಸುತ್ತದೆ. ಅದರ ವಿರುದ್ಧ ಮೂಕಿಯಾದ ನಾಯಕಿ (ಕಾಣಿ) ತಾನು ಬದುಕಲು ನೆಲೆ ಕಂಡುಕೊಳ್ಳಲು ನಡೆಸುವ ಪ್ರಯತ್ನ ಸಮಾಜದ ಕ್ರೂರ ಮುಖವನ್ನು ಪರಿಚಯಿಸುವ ಜೊತೆಗೆ ವಿಡಂಬನೆಯನ್ನು ಮಾಡುತ್ತದೆ.

ಕಟ್ಟೀಮನಿಯವರ 'ಗಿರಿಜಾ ಕಂಡ ಸಿನಿಮ'ಕತೆ ತಂತ್ರದ ದೃಷ್ಟಿಯಿಂದ ಮುಖ್ಯವಾಗುತ್ತದೆ. ಹಾಗು 'ಮಾಡಿ ಮಡಿದವರು' ಕಾದಂಬರಿಯಲ್ಲಿ ಬಂಡಾಯದ ವಿವಿಧ ಮುಖಗಳು ವೇದ್ಯವಾಗಿರುತ್ತದೆ. ಹಳ್ಳಿಯ ಜೀವನವನ್ನು ಬೆಂಬಲಿಸುವ ಈ ಕಾದಂಬರಿ ಗಾಂಧಿವಾದವನ್ನು ಧ್ವನಿಸುತ್ತದೆ. ಕಟ್ಟೀಮನಿಯವರ ಕಾದಂಬರಿಯಲ್ಲಿ ಬಂಡಾಯ ತಣ್ಣಗಿನ ರೋಷವಾಗಿ ಕಂಡು ಬರುತ್ತದೆ

ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು ಈ ಕಾಲಘಟ್ಟದಲ್ಲಿ ಬಂದವಾಗಿದ್ದು ತ.ರಾ.ಸು.ರವರು ಚಿತ್ರದುರ್ಗದ ಇತಿಹಾಸವನ್ನು ಆಧರಿಸಿ ಕಾದಂಬರಿಗಳನ್ನು ಬರೆದರು.

ನಿರಂಜನರವರ 'ಮೃತ್ಯುಂಜಯ' ಕಾದಂಬರಿಯಲ್ಲಿ ಶ್ರಮಿಕ ವರ್ಗದ ಪರವಾದ ದನಿ ಇದೆ. 'ಚಿರಸ್ಮರಣೆ' ಕೂಡ ಜಮೀನುದಾರಿಕೆ ಹಾಗು ಬಂಡವಾಳಶಾಹಿ ವಿರುದ್ಧದ ದನಿ ಎತ್ತುತ್ತದೆ.

ತ್ರಿವೇಣಿಯವರ 'ಹೂವು ಹಣ್ಣು' ಕೃತಿಯಲ್ಲಿಯೂ ಸ್ತ್ರೀಪರ ಧೋರಣೆ ಇರುವುದನ್ನು ಗಮನಿಸಬಹುದು. ಪ್ರಗತಿಶೀಲ ಕಾಲಘಟ್ಟದಲ್ಲಿ ಪ್ರಕಟವಾದ 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಕಾದಂಬರಿಗಳು ಬಂಡಾಯದ ಅಂಶಗಳಿರುವ ಕಾದಂಬರಿಗಳಾಗಿದೆ. ಚಿರಸ್ಮರಣೆ ಕಯ್ಯೂರು ಎಂಬ ಹಳ್ಳಿಯ ಕಾರ್ಮಿಕರ ಜೀವನವನ್ನು ತೆರೆದಿಟ್ಟಿದೆ. ಕಾರ್ಮಿಕ ಹೋರಾಟ ಇಲ್ಲಿಯ ಮುಖ್ಯಾಂಶ. ಈ ಕಾದಂಬರಿಯ ಕಾರ್ಮಿಕರು ರಾಜಕೀಯವನ್ನು ತಿಳಿಯದ ಮುಗ್ಧರು. ಒಗ್ಗಟ್ಟಿನಿಂದ ಬಾಳ್ವೆ ನಡೆಸುವ ಇವರು ತಮ್ಮ ಮೂಲಭೂತ ಅವಶ್ಯಕತೆಗಳಿಗಾಗಿ ಹೋರಾಡುತ್ತಾರೆ. ಮಧ್ಯಮವರ್ಗದ ಕುಟುಂಬಗಳು ಎದುರಿಸುವ ಸಮಸ್ಯೆಗಳನ್ನು ಇಲ್ಲಿ ಬಿಚ್ಚಿಡಲಾಗಿದೆ

'ಮೃತ್ಯುಂಜಯ' ಕಾದಂಬರಿಯಲ್ಲಿ ಸಾವಿರಾರು ವರ್ಷಗಳ ಹಿಂದಿನ ಗುಪ್ತರ ಕಾಲದ ಅರಸೊತ್ತಿಗೆಯನ್ನು ಪ್ರತಿಭಟಿಸಿ ನಿಲ್ಲುವುದನ್ನು ಕಾಣಬಹುದು. ಸಮಾಜದ ಕೆಟ್ಟತನಗಳನ್ನು ವಿಡಂಬಿಸುವ ರೀತಿ ಇಲ್ಲಿ ಬಂಡಾಯವಾಗಿದೆ.

ಕಾರಂತರ ಕೃತಿಗಳಲ್ಲಿ 'ಚೋಮನದುಡಿ' ಇಂತಹ ಜನಪರವಾದ ನಿಲುವುಗಳನ್ನು ಪ್ರತಿಪಾದಿಸುತ್ತದೆ. ಚೋಮನ ಕುಟುಂಬದ ಸದಸ್ಯರೆಲ್ಲರೂ ಅವನಿಗೆ ನೋವನ್ನೇ ನೀಡುತ್ತಾರೆ. ಮಗಳು ಬೆಳ್ಳಿ ಮನವೇಲ ಸೇರಗಾರನಿಂದ ಮೋಸಹೋಗುವುದು. ಅವನ ಚಿಕ್ಕ ಮಗ ನೀರು ಪಾಲಾಗುವುದು, ಇದಲ್ಲದೆ ಜಮೀನುದಾರ ಸಂಕಪ್ಪಯ್ಯನಿಂದ ತುಳಿತಕ್ಕೆ ಒಳಗಾಗುವುದು. ಇವೆಲ್ಲದಕ್ಕೂ ಚೋಮನದುಡಿಯೊಂದೇ ಪ್ರತಿಕ್ರಿಯಿಸುತ್ತದೆ.

ಇದೆಲ್ಲದರ ಒಟ್ಟು ಪರಿಣಾಮದಿಂದಾಗಿ ಓದುಗನ ಮನದಲ್ಲಿ ಬಂಡಾಯದ ಅಲೆ ಏಳುತ್ತದೆ.

'ಸರಸಮ್ಮನ ಸಮಾಧಿ'ಯಲ್ಲಿ ಕೌಟುಂಬಿಕ ನೆಲೆಯಲ್ಲಿ ವಿಚಾರ ಮಾಡುತ್ತಾರೆ. ದೇವರು, ದಾಂಪತ್ಯ, ಇಂತಹ ವಿಷಯಗಳನ್ನು ಪ್ರಶ್ನಿಸುತ್ತಾರೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸೋತಿ, ಪಾರ್ವತಿಯರು ತಮ್ಮ ಹುಟ್ಟೂರಿನಲ್ಲಿಯೇ ವಿಶ್ವವನ್ನು ಕಾಣುವ ಪ್ರಯತ್ನದಲ್ಲಿ ಯಶಸ್ವಿಯಾಗುತ್ತಾರೆ. ಗ್ರಾಮೀಣ ಸಂವೇದನೆಯನ್ನು ಈ ಕಾದಂಬರಿಯಲ್ಲಿ ಮನಗಾಣಬಹುದು. 'ಬೆಟ್ಟದ ಜೀವ'ದಲ್ಲಿ ಆಧುನಿಕ ಸವಲತ್ತುಗಳು ಬೇಕೆ?ಬೇಡವೆ? ಬೇಕಾದರೆ ಅದು ಪಾಶ್ಚಾತ್ಯ ಮಾದರಿಯದ್ದೋ? ಭಾರತಿಯ ಮಾದರಿಯದ್ದೋ? ಈ ರೀತಿಯ ಪ್ರಶ್ನೆಗಳನ್ನು ಒಡ್ಡುತ್ತಾ ಗ್ರಾಮ ಸಂವೇದನೆಯನ್ನು, ದೇಶೀಯತೆಯನ್ನು ಸಾರುತ್ತದೆ.

ಕನ್ನಡ ನವೋದಯದ ಕಾಲದಲ್ಲಿಯೇ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದ ಅಡಿಗರು ನವ್ಯ ಕಾವ್ಯ ಪ್ರವರ್ತಕರಾದರು. ಸಾಮಾಜಿಕ ನ್ಯಾಯ ಪ್ರತಿಪಾದನೆ ಹಾಗೂ ಮನುಷ್ಯನ ಮೂಲಪ್ರವೃತ್ತಿ ಇವುಗಳ ನಡುವಿನ ತಾಕಲಾಟವನ್ನು ನವ್ಯರು ತೆರೆದಿಟ್ಟರು. ೧೯೫೦ರ ಸುಮಾರಿಗೆ ನವ್ಯ ಸಾಹಿತ್ಯ ಬೆಳೆಯತೊಡಗಿತು. ತಾತ್ವಿಕವಾಗಿಯೂ, ತಾಂತ್ರಿಕವಾಗಿಯೂ, ನವ್ಯರು ಹೊಸ ಸಾಹಿತ್ಯ ವಿಧಾನವನ್ನು ಕಂಡು ಕೊಂಡರು. ನವೋದಯ ಕಾಲದಲ್ಲಿದ್ದ ವಿನಾಯಕ, ಚನ್ನವೀರ ಕಣವಿ, ಜಿ.ಎಸ್. ಎಸ್., ಸು.ರಂ. ಯಕ್ಕುಂಡಿ ಮುಂತಾದವರು ನವ್ಯದಲ್ಲಿಯೂ ಸಾಹಿತ್ಯ ರಚಿಸಿದರು. ಶಾಂತಿನಾಥ ದೇಸಾಯಿ, ಶ್ರೀ ಕೃಷ್ಣ ಆಲನಹಳ್ಳಿ, ತೇಜಸ್ವಿ, ದೇವನೂರು ಮಹಾದೇವ, ಕೆ.ಎಸ್. ನಿಸಾರ್ ಅಹ್ಮದ್, ಕಂಬಾರ, ಲಂಕೇಶ್, ರಾಮಚಂದ್ರ ಶರ್ಮ, ಯು. ಆರ್. ಅನಂತಮೂರ್ತಿ ನವ್ಯ ಸಾಹಿತ್ಯದಲ್ಲಿ ಮುಖ್ಯರೆನಿಸಿದ್ದಾರೆ.

ನವ್ಯ ಸಾಹಿತಿಗಳಲ್ಲಿ ಮುಖ್ಯವಾಗಿ ಪಾಶ್ಚಾತ್ಯ ಇಂಗ್ಲೀಷ್ ಸಾಹಿತ್ಯದ ನವ್ಯರಲ್ಲಿ ನಡೆದ ಪ್ರಯೋಗಗಳು ಹಾಗೂ ಭಾರತೀಯ ಸಾಮಾಜಿಕ ಸಂದರ್ಭಗಳು ಪ್ರೇರಣೆಯಾಗಿದೆ.

ಶಾಂತಿನಾಥ ದೇಸಾಯಿಯವರ 'ಓಂ ಣಮೋ' ಕಾದಂಬರಿಯಲ್ಲಿ ದಟ್ಟವಾದ ಜೈನಧರ್ಮದ ವಿಚಾರಗಳು ಇದ್ದು ಅದರ ಪ್ರಸ್ತುತತೆಯೇನು? ಎಂಬ ಬಗ್ಗೆ ಪ್ರಶ್ನೆ ಎತ್ತುತ್ತದೆ. ವ್ಯಕ್ತಿ ಹಾಗೂ ಸಮಷ್ಟಿ ಎರಡೂ ಮುಖ್ಯವಾದ ನವ್ಯ ಸಾಹಿತ್ಯದಲ್ಲಿ ಸನಾತನ ಧರ್ಮಗಳನ್ನು ಪ್ರಶ್ನಿಸುವ ಪ್ರಯತ್ನಗಳು ನಡೆದಿವೆ. ಆ್ಯಡಂ, ಆ್ಯನಿ, ರೋಜಾ ಮುಂತಾದ ಯುವ ಪಾತ್ರಗಳು ಈ ಪ್ರಯತ್ನ ಮಾಡುತ್ತದೆ. ಸಾಮಾಜಿಕ ಅಂಶಗಳನ್ನು ಧಾರ್ಮಿಕತೆಯು ಹಿಡಿದಿಟ್ಟಿರುವ ರೀತಿ ಮತ್ತು ಅದರಿಂದ ಹೊರಬರುವ ಪ್ರಯತ್ನಗಳು ಇದರಲ್ಲಿ ಕಂಡು ಬರುತ್ತದೆ.

ಕಂಬಾರರ ನಾಟಕಗಳಲ್ಲಿ ಇಂತಹ ಜನಪರ ದೃಷ್ಟಿಯನ್ನು ಕಾಣಬಹುದು. 'ಹುಲಿಯ ನೆರಳು' ಹಾಗು 'ಋಷ್ಯಶೃಂಗ' ಎಂಬ ಎರಡು ನಾಟಕಗಳಲ್ಲಿ ಇಂತಹ ಅಂಶಗಳನ್ನು ಕಾಣಬಹುದು. ಜನಪದ ಕತೆಯ ಅಂಶವಿರುವ ಈ ಎರಡು ನಾಟಕಗಳಲ್ಲಿ ಬಂಡಾಯದ ಅಂಶಗಳಿವೆ. 'ಹುಲಿಯ ನೆರಳು'ವಿನ ನಾಯಕ

ರಾಮಗೊಂಡ ಊರಿನ ರಕ್ಷಣೆಗಾಗಿ ಮುನ್ನುಗ್ಗುವ ಜನಪರ ಕಾಳಜಿಯನ್ನು ಕಾಣಬಹುದು. ಇದೇ ಕತೆಯ ಮುಂದುವರಿಕೆ 'ಋಷ್ಯಶೃಂಗ'ದಲ್ಲೂ ಮುಂದುವರೆಯುತ್ತದೆ. ಇಲ್ಲಿಯ ನಾಯಕ 'ಬಾಳಗೊಂಡ' ಯಕ್ಷಿಣಿಯರ ಹಾರೈಕೆಯಿಂದ ಊರಿಗೆ ಉಪಕಾರ ಮಾಡುವಲ್ಲಿ ಯಶಸ್ವಿಯಾಗುತ್ತಾನೆ.

ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳಾದ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯ್ಯನ ದಶಾವತಾರ' ಮುಂತಾದ ಕಾದಂಬರಿಗಳಲ್ಲಿ ಆಧುನಿಕತೆಯನ್ನು ಎದುರಿಸುವ ಅಂಶಗಳು ಕಂಡು ಬರುತ್ತದೆ. ಪರಸಂಗದ ಗೆಂಡೆತಿಮ್ಮ ತಾನು ಎಲೆ ಅಡಿಕೆ ವ್ಯಾಪಾರಿಯಾಗಿದ್ದು ಪಟ್ಟಣದ ಹೆಂಡತಿಯ ದೆಸೆಯಿಂದ ಅವನ ವೈಯಕ್ತಿಕ ಜೀವನದಲ್ಲೂ, ವ್ಯಾಪಾರದಲ್ಲೂ ಹೊಸ ಬದಲಾವಣೆಯಾಗಿ, ಊರಿನವರಿಂದಲೂ ಅವಮಾನಿತನಾಗುತ್ತಾನೆ. ನಗರ ಸಂಸ್ಕೃತಿಯು ಹಳ್ಳಿಯ ಜನಜೀವನದ ಮೇಲೆ ಬೀರುವ ಪರಿಣಾಮ, ಸಂಘರ್ಷ ಇವುಗಳನ್ನು ಇಲ್ಲಿ ಚಿತ್ರಿಸಲಾಗಿದೆ. ದೇಸೀಯತೆಯನ್ನು ಉಳಿಸಿಕೊಳ್ಳುವ ಹಂಬಲವನ್ನು ಇಲ್ಲಿ ಕಾಣಬಹುದು.

ತೇಜಸ್ವಿಯವರ ಸಾಹಿತ್ಯದಲ್ಲಿಯ ಬಂಡಾಯದ ಸ್ವರೂಪ ವಿಭಿನ್ನವಾದದ್ದು. ಸರ್ವಾಧಿಕಾರದ ವಿರುದ್ಧವಾಗಿದ್ದು, ವೈಚಾರಿಕತೆ ಹಾಗೂ ಮಾನವೀಯ ಗುಣಗಳಿಂದ ಕೂಡಿದೆ. 'ಚಿದಂಬರ ರಹಸ್ಯ' ಕಾದಂಬರಿಯಲ್ಲಿ ರೋಗಗ್ರಸ್ತ ಸಮಾಜವನ್ನು ತಿದ್ದುವ ಬದಲಾಗಿ ನಾಶಗೊಳಿಸಲಾಗುತ್ತದೆ. ಜಯಂತಿ ಹಾಗೂ ರಫಿ ಅಲ್ಲಿ ಬದುಕುಳಿಯುತ್ತಾರೆ. ಅವರು ಆದರ್ಶ ಸಮಾಜವನ್ನು ಹುಟ್ಟು ಹಾಕುವ ನಿರೀಕ್ಷೆಯನ್ನು ಓದುಗರಲ್ಲಿ ಮೂಡಿಸುತ್ತಾರೆ. ಹೊಸ ಹುಟ್ಟಿಗೆ ಹಾತೊರೆಯುವ ಬಂಡಾಯದ ಲಕ್ಷಣ ಈ ಕಾದಂಬರಿಯ ಕೊನೆಯಲ್ಲಿ ಕಾಣಿಸುತ್ತದೆ.

ಬಡತನ, ನಿರುದ್ಯೋಗ, ವ್ಯವಸ್ಥೆಯ ಹುಳುಕುಗಳು ಇವುಗಳಿಗೆ ದೇವನೂರು ಮಹಾದೇವರ 'ಒಡಲಾಳ' ಸ್ಪಂದಿಸುವ ರೀತಿ ಅನನ್ಯವಾದದ್ದು. ಸಾಕವ್ವನ ಸಂಸಾರ ಚಿತ್ರಣ ಅಂತಹ ಭಾರತೀಯ ಕುಟುಂಬದ ಎಲ್ಲ ನೋವುಗಳಿಗೆ ಕಾರಣವನ್ನು ಹುಡುಕುತ್ತದೆ. ಒಡಲಾಳದ ಸಾಕವ್ವನ ಕುಟುಂಬದ ಸದಸ್ಯರು ತಮ್ಮ ಹಸಿವನ್ನು ತೀರಿಸಿಕೊಳ್ಳುವ ಸಲುವಾಗಿ ಕದ್ದ ಕಡಲೆಕಾಯಿಯನ್ನು ಒಂದೂ ಬಿಡದಂತೆ ತಿಂದುಬಿಡುತ್ತಾರೆ. ಪೋಲಿಸಿನವರು ಬಂದಾಗ ಅವರಿಗೆ ಒಂದು ಸಿಪ್ಪೆಯೂ ಕಾಣದಂತೆ ಮಾಡುತ್ತಾರೆ. ಸಾಕವ್ವನ ಕೋಳಿ ಕಳೆದುಹೋದಾಗ ಅವಳು ಇದ್ದ ಇನ್ನೊಂದು ಕೋಳಿಯನ್ನು ಪೋಲಿಸರಿಗೆ ಲಂಚವಾಗಿ ಕೊಟ್ಟು ಬರಿಗೈ ಆಗುತ್ತಾಳೆ. ವ್ಯವಸ್ಥೆಯ ವಿರುದ್ಧ ಕೂಗಾಡುತ್ತಾಳೆ. ಆದರೂ ಅವಳಿಗೆ ನ್ಯಾಯ ದೊರಕುವುದಿಲ್ಲಯ ಒಟ್ಟಾರೆ ಬಂಡಾಯ ಈ ಕತೆಯ ಒಳದನಿಯಾಗಿದೆ. 'ಕುಸುಮಬಾಲೆ'ಯು ಭಾಷೆ ಮತ್ತು ತಂತ್ರದ ದೃಷ್ಟಿಯಿಂದ ದೇಸೀಯತೆಯನ್ನು ಒಳಗೊಂಡಿರುವುದನ್ನು ಕಾಣಬಹುದು.

ಲಂಕೇಶರ 'ಸಂಕ್ರಾಂತಿ' ನಾಟಕವು ಬಸವಣ್ಣನವರ ಸಾಮಾಜಿಕ ಕ್ರಾಂತಿಯ ವಸ್ತುವನ್ನು ಒಳಗೊಂಡಿದ್ದು, ಬಸವಣ್ಣನವರ ಸಾಮಾಜಿಕ ನಿಲುವುಗಳಿಂದಾದ ಲಾಭ-ನಷ್ಟಗಳನ್ನು ಉಜ್ಜ, ಕೆಂಚ ಮೊದಲಾದ ಪಾತ್ರಗಳ

ಮೂಲಕ ವ್ಯಕ್ತ ಪಡಿಸುತ್ತಾರೆ. ಪ್ರಮುಖ ಪಾತ್ರಗಳಾದ ಉಷಾ-ರುದ್ರರ ಪ್ರೇಮವು ಬಲಿಯಾಗುವುದು ಪ್ರಭುತ್ವಕ್ಕೆ. ಈ ಅಂಶಗಳು ಸಮಾಜದ ಕಣ್ಣು ತೆರೆಸುವ ಕೆಲಸವನ್ನು ಮಾಡುತ್ತದೆ.

ನಿಸಾರ್ ಅಹಮದ್‌ರವರ 'ಕುರಿಗಳು, ಸಾರ್ ಕುರಿಗಳು' ಕವನ ರಾಜಕೀಯ ಅನೀತಿಯ ವಿರುದ್ಧವಾಗಿ ತಣ್ಣನೆ ಪ್ರತಿರೋಧ ವ್ಯಕ್ತ ಪಡಿಸಿದರೆ 'ಅಮ್ಮ, ಆಚಾರ, ನಾನು' ಕವನದಲ್ಲಿ ಧಾರ್ಮಿಕ ಆಚರಣೆಗಳ ಬಿಗಿ ಹಿಡಿತದಿಂದ ಮುಕ್ತವಾಗಬೇಕೆಂಬ ಹಂಬಲವನ್ನು ವ್ಯಕ್ತಪಡಿಸುತ್ತಾರೆ, ಸಮಾನತೆಗಾಗಿ ಹಾತೊರೆಯುತ್ತಾರೆ.

ಒಟ್ಟಾರೆಯಾಗಿ ನವ್ಯ ಸಾಹಿತ್ಯದ ಬಂಡಾಯ ರೋಷಾವೇಶದಿಂದ ಕೂಡಿರದೆ ಪ್ರತಿಯೊಬ್ಬ ವ್ಯಕ್ತಿಯ ಮನಪರಿವರ್ತನೆಗೆ ಹೆಚ್ಚಿನ ಒತ್ತುಕೊಡುತ್ತದೆ. ವ್ಯಕ್ತಿಯ ಸಮಸ್ಯೆಗಳ ಪರಿಹಾರದಿಂದ ಸಮಾಜದ ಒಟ್ಟು ವ್ಯವಸ್ಥೆಯಲ್ಲಿ ಸಮಾನತೆಯನ್ನು ತರಬಹುದೆಂಬ ಆಶಯ ಬಹುತೇಕ ಈ ಎಲ್ಲರ ಬರವಣಿಗೆಯಲ್ಲಿ ಕಂಡು ಬರುತ್ತದೆ.

ನವ್ಯೋತ್ತರ ಸಾಹಿತ್ಯದಲ್ಲಿ ಈ ಹಿಂದಿನ ಎಲ್ಲ ಸಾಹಿತ್ಯಕ್ಕಿಂತಲೂ ತೀವ್ರವಾದ ಬಂಡಾಯದ ನೆಲೆಗಳನ್ನು ಗುರುತಿಸಬಹುದು. ಹನ್ನೆರಡನೆ ಶತಮಾನದ ಸಾಮಾಜಿಕ ಪರಿಸರದ ಪರಿವರ್ತನೆಗಾಗಿ ಹುಟ್ಟಿಕೊಂಡ 'ವಚನ ಚಳವಳಿ'ಯಂತೆಯೇ ೨೦ನೇ ಶತಮಾನದಲ್ಲಿ ಬಂಡಾಯ ಚಳವಳಿ ಹುಟ್ಟಿಕೊಂಡಿತು. ಎಂದರೆ ಎರಡಕ್ಕೂ ಸಮಾಜವೇ ಮೂಲ ನೆಲೆ. ಎರಡಕ್ಕೂ ಸಾಮಾಜಿಕ ಸಮಾನತೆಯೇ ಗುರಿ. ಇದು ಸುಮಾರು ಕಾಲುಶತಮಾನದಷ್ಟು ದೀರ್ಘ ಕಾಲದಿಂದ ತನ್ನ ತನವನ್ನು ಉಳಿಸಿಕೊಂಡು ಬಂದಿದೆ. ಈ ಹಿಂದಿನ ಸಾಹಿತ್ಯದಲ್ಲಿ 'ಬಂಡಾಯ'ವು ಸಾಹಿತ್ಯದ ಒಂದು ಅಂಶವಾಗಿ ವ್ಯಕ್ತವಾಗಿದ್ದರೆ, ಇದೀಗ ಬಂಡಾಯದ ಅಂಶಗಳೇ ಸಾಹಿತ್ಯದ ಕೇಂದ್ರವಸ್ತುವಾಯಿತು. ಇದು ಸಾಹಿತ್ಯವಷ್ಟೇ ಅಲ್ಲ ಸಾಮಾಜಿಕ ಚಳವಳಿಯೂ ಆಗಿದ್ದಿತು. ಪ್ರಗತಿಪರ ಚಿಂತನೆ ಮತ್ತು ಪ್ರಚೋದನೆ ಈ ಸಾಹಿತ್ಯದ ಮುಖ್ಯ ಉದ್ದೇಶವಾಗಿತ್ತು. ಪ್ರಜಾಪ್ರಭುತ್ವವಾದಿ ನೆಲೆಯಲ್ಲಿ ಬಂಡಾಯ ಹುಟ್ಟಿಕೊಂಡಿತು. ಅನಂತರ ಅದರ ರೂಪುರೇಷೆಗಳು ಇನ್ನೂ ವಿಸ್ತಾರಗೊಂಡವು. ದಲಿತ ಸಂವೇದನೆ, ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆ ಹಾಗು ಜಾಗತೀಕರಣ ನೀತಿಗಳನ್ನು ಇದು ಒಳಗೊಂಡಿದೆ.

ಹಾಗೆಯೇ ಸಾಹಿತ್ಯ ವಲಯದಲ್ಲಿ ಎಲ್ಲ ವರ್ಗದ ಜನರ ಒಳದನಿ ವ್ಯಕ್ತವಾಗಲು ಇದು ವೇದಿಕೆಯಾಯಿತು. ಸಮಾಜದಿಂದ ಆಗುತ್ತಿರುವ ಸಮಸ್ಯೆಯನ್ನು ಪರಿಹರಿಸಲು ಅಂತದೇ ಸಮಸ್ಯೆಗಳಿರುವ ಸಮೂಹವನ್ನು ರೂಪಿಸಿ ಸಮಸ್ಯೆಯ ವಿರುದ್ಧ ಹೋರಾಟ ನಡೆಸುವುದು ಬಂಡಾಯದ ಗುರಿಯಾಗಿದೆ. ಈ ಆಶಯಗಳನ್ನು ಹೊತ್ತ ಸಾಹಿತ್ಯದ ಶೈಲಿಯಲ್ಲಿಯೂ ನಿರೂಪಣೆಯಲ್ಲಿಯೂ ಬದಲಾವಣೆಗಳಾದವು. ಇತಿಹಾಸದ ಕಳಚಿದ ಕೊಂಡಿಗಳನ್ನು ಜನಪರ ದೃಷ್ಟಿಕೋನದಿಂದ ಹುಡುಕುವ ಪ್ರಯತ್ನ ಇಲ್ಲಿ ನಡೆದಿದೆ ಎನ್ನಬಹುದು. ಜನ ವಿರೋಧಿಯಾದ ಯಾವುದೇ ವ್ಯವಸ್ಥೆಯನ್ನು ಪರಿಷ್ಕರಿಸುವ ಕೆಲಸ ಇದರಲ್ಲಿ ನಿರಂತರವಾಗಿ ನಡೆದಿದೆ. ಆ ಮೂಲಕ ಹೊಸ ಸವಾಲುಗಳಿಗೆ ಅದು ಸದಾ ತನ್ನನ್ನು ತಾನು ಒಡ್ಡಿಕೊಳ್ಳಬೇಕಾದ ಅನಿವಾರ್ಯತೆ ಇದೆ.

ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಅರವಿಂದ ಮಾಲಗತ್ತಿ, ಮ.ನ.ಜ., ಚದುರಂಗ, ಶಶಿಕಲಾ ವಸ್ತ್ರದ, ಸಾರಾ ಅಬುಬಕ್ಕರ್, ಬರಗೂರು ರಾಮಚಂದ್ರಪ್ಪ, ಚಂಪಾ, ಕಾಳೇಗೌಡ ನಾಗವಾರ ಮೊದಲಾದವರ ಕೃತಿಗಳಲ್ಲಿ ಬಂಡಾಯದ ಅಂಶಗಳು ದಟ್ಟವಾಗಿದ್ದು ಜನಪರವಾಗಿರುವುದನ್ನು ಕಾಣಬಹುದು.

ಬಡರೈತರು, ಕಾರ್ಮಿಕರು, ದಲಿತರು, ಸ್ತ್ರೀಯರು ಹೀಗೆ ನೊಂದ ಜನರ ಬಗ್ಗೆ ಬರೆದ ಸಾಹಿತ್ಯವು ಬಂಡಾಯದ ಅಂಶಗಳಿಂದ ಕೂಡಿದ್ದು ಅದನ್ನು ಬಂಡಾಯ ಸಾಹಿತ್ಯ ಎನ್ನಬಹುದು. ಶ್ರಮಜೀವಿಗಳ ನೋವು ನಲಿವುಗಳ ಸ್ಪಷ್ಟ ಚಿತ್ರಣ ಇದರಲ್ಲಿದ್ದು ಪ್ರತಿಭಟನೆ ಅದರ ಮುಖ್ಯ ಅಂಗವಾಗಿರುತ್ತದೆ.

ಬಂಡಾಯ ಸಾಹಿತ್ಯವೆನ್ನುವುದು ಜಾತಿವಾದಿಯಾದುದಲ್ಲಿ, ದುರ್ಬಲರೂ ಅಸಮಾನತೆಯ ವಿರುದ್ಧ ದನಿ ಎತ್ತುವುದನ್ನು ಇಲ್ಲಿ ಕಾಣಬಹುದು. ಜಾತಿ, ವರ್ಗ ಮುಂತಾದ ವಿಷಯಗಳನ್ನು ಮೀರಿ ಜಾಗತೀಕರಣ, ಉದಾರೀಕರಣ ಮುಂತಾದವುಗಳ ಬಗ್ಗೆಯೂ ಬಡಾಯ ಸಾಹಿತ್ಯ ವಿಮರ್ಶನ ದೃಷ್ಟಿಯನ್ನು ಹೊಂದಿದೆ. ತಮ್ಮ ದೇಶ, ಭಾಷೆ ಮುಂತಾದವುಗಳ ಬಗ್ಗೆ ನಂಬಿಕೆ ಇಟ್ಟು ಸಮಷ್ಠಿ ಪ್ರಜ್ಞೆಯಲ್ಲಿ ಸಾಹಿತ್ಯ ರೂಪಿಸುವುದನ್ನು ಈ ಹಂತದಲ್ಲಿ ಕಾಣಬಹುದು.

ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯಲ್ಲಿ ಮುದ್ದಳ್ಳಿಯ ಮಚಿಗಾರ ಜಾತಿಯ ಬಂಗಾರಪ್ಪನು ಸತ್ತಮೇಲೆ ನಡೆಯುವ ಅನಿರೀಕ್ಷಿತ ಘಟನೆಗಳು ಮಾನವೀಯ ಸಂಬಂಧಗಳನ್ನು ದುಡ್ಡಿನ ಪ್ರಾಬಲ್ಯವನ್ನು ಸೂಚಿಸುವ ಅಂಶಗಳು ಇದ್ದು ಕಾದಂಬರಿ ಅದರ ವಿರುದ್ಧ ಮೌನವಾಗಿ ಪ್ರತಿಭಟಿಸುತ್ತದೆ. ಕಾದಂಬರಿಯ ಹೆಸರು ಸೂಚಿಸುವ ಅರ್ಥ ಸತ್ತವರಿಗೆ ಮಾಡುವ ಕರ್ಮಾಂತರಗಳು ಎಂದಾದರೂ, ಒಂದು ಸಾವಿನ ಸುತ್ತ ಹೆಣೆದ ಜನರ ನಂಬಿಕೆಗಳು, ಆಚರಣೆಗಳು ಇಲ್ಲಿ ಕಾಣುತ್ತದೆ. ಸಾವಿನಂತಹ ಸಂದರ್ಭದಲ್ಲಿಯೂ ಜೀವನ ಪರವಾದ ಮನಸ್ಥಿತಿಯನ್ನು ಹೊಂದಿರುವುದನ್ನು ಅಕ್ಕವ್ವನ ಪಾತ್ರದಲ್ಲಿ ಕಾಣಬಹುದು.

ಶಿವರುದ್ರ ಕಲ್ಲೊಳಿಕರ್‌ರವರ 'ಹೊಲಗೇರಿ ರಾಜಕುಮಾರ' ಕಾದಂಬರಿಯ ನಾಯಕ ಮಾದೇವ ತಾನು ಹುಟ್ಟಿದ್ದು ಕ್ಷತ್ರಿಯನಾಗಿ ಎಂದು ತಿಳಿದ ಮೇಲೆ ತಾನು ಇದುವರೆವಿಗೂ ಬೆಳೆದ ಹೊಲೆಯ ಜಾತಿಯನ್ನು ತೊರೆಯಲು ಹೆಣಗಾಡುತ್ತಾನೆ. ಸಂಸ್ಕೃತಿಗಳ ಮುಖಾಮುಖಿ ಇಲ್ಲಿ ಆಗಿರುವುದನ್ನು ಕಾಣಬಹುದು. ಕೊನೆಗೆ ತಾನು ತನ್ನತನವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿ ಮೊದಲ ಸ್ಥಾನಕ್ಕೇ ತಲುಪುತ್ತಾನೆ. ಒಂದು ರೀತಿಯ ರೂಪಾಂತರ ಕ್ರಿಯೆಯು ಇಲ್ಲಿ ಕಂಡು ಬರುತ್ತದೆ.

೨೦೦೩ರಲ್ಲಿ ಪ್ರಕಟವಾದ ಕೆ. ಎಸ್. ನರಸಿಂಹಸ್ವಾಮಿಯವರ 'ದೀಪ ಸಾಲಿನ ನಡುವೆ' ಕವನ ಸಂಕಲನದಲ್ಲಿ ಕವಿ ತಮ್ಮ ಹಿಂದಿನ ಶೈಲಿಯನ್ನೇ ಉಳಿಸಿಕೊಂಡು ಜನಪರವಾದ ವಿಚಾರಗಳನ್ನೊಳಗೊಂಡು ಕವನ ರಚಿಸಿದ್ದಾರೆ. ಆ ಸಂಕಲನದ ಹಸಿದ ಮಗು ಕವನದಲ್ಲಿ

ಒಂದೊಂದು ಬೀದಿಗೊಂದೊಂದು ನೀತಿಯ ಕಂಡೆ
ಇದರಲ್ಲಿ ಅದನು ಬೇಡುವುದು ಸರಿಯೆ?
ಘಂಟೆಗಳ ಬಡಿಯುತ್ತ ಹುಗ್ಗಿಯನು ಹಂಚಿದರು
ಹಸಿದ ಮಕ್ಕಳಿಗೆಂದು ದೇಗುಲದಲಿ.

'ಅನ್ನ ಹೆಚ್ಚೋ ನಿಮ್ಮ ಕವಿತೆ ಹೆಚ್ಚೋ' ಎಂದು
ಕೇಳಿದೆ ನಾನು, ಬರಲಿಲ್ಲ ಉತ್ತರ
ಹಸಿದ ಮಕ್ಕಳ ಕರೆದೆ 'ಬನ್ನಿ ಹತ್ತಿರ' ಎಂದು,
ಹಸಿದ ಹೊಟ್ಟೆಯ ಮೇಲೆ ತೆರೆಯನೆಳೆದೆ.[21]

ಎಂದಿದ್ದಾರೆ.

ಇಲ್ಲಿ ಮಗುವಿನ ಹಸಿವು, ಬಡತನ ಮುಂತಾದ ನೋವುಗಳು ಕವಿಯ ಮನಸ್ಸನ್ನು ಕಲಕುತ್ತದೆ. ಅದಕ್ಕೆ ತಾತ್ಕಾಲಿಕ ಪರಿಹಾರವನ್ನು ತಾವೇ ಕಂಡು ಕೊಳ್ಳುತ್ತಾರೆ. ಎಲ್ಲರಿಗೂ ಸಮಬಾಳು ಸಿಗಬೇಕೆಂಬ ಜನಪರ ಆಶಯವನ್ನು ಇಲ್ಲಿ ಕಾಣಬಹುದು.

ಸಾರಾ ಅಬುಬಕ್ಕರ್ ರವರ ಸಣ್ಣ ಕತೆ ಹಾಗು ಕಾದಂಬರಿಗಳಲ್ಲಿ ಸ್ತ್ರೀವಾದಿ ನೆಲೆಯಲ್ಲಿ ಬಂಡಾಯವು ವ್ಯಕ್ತವಾಗಿರುವುದನ್ನು ಗಮನಿಸಬಹುದು. ಸಾರಾ ಅವರ ಕಥೆಗಳಲ್ಲಿ ಕಾಣುವ ಮುಸ್ಲಿಂ ಸಂವೇದನೆಯು ಭಿನ್ನ ಸಂಸ್ಕೃತಿಯ ನೆಲೆಯಿಂದ ರೂಪುಗೊಂಡದ್ದು. ಅನಕ್ಷರತೆ, ಹಸಿವು, ಬಡತನ, ನಿರುದ್ಯೋಗ ಈ ಎಲ್ಲವೂ ಹೇಗೆ ಹೆಣ್ಣಿನ ಏಳಿಗೆಗೆ ಮಾರಕವಾಗಿದೆ ಎಂಬುದನ್ನು ಮತ್ತೆ ಮತ್ತೆ ಹೇಳುತ್ತಾರೆ. ಅಂತೆಯೇ ಧಾರ್ಮಿಕ ಕಟ್ಟುಪಾಡುಗಳೂ ಹೇಗೆ ಸ್ತ್ರೀ ಶೋಷಣೆಗೆ ಕಾರಣವಾಗಿದೆ ಎಂಬುದನ್ನು ಇವರ ಕತೆಗಳು ವಿವರಿಸುತ್ತದೆ. ಇವರ 'ನಿಯಮ ನಿಯಮಗಳ ನಡುವೆ' ಕತೆಯಲ್ಲಿ ಮೇಲೆ ಹೇಳಲಾದ ಎಲ್ಲ ಸಾಮಾಜಿಕ ತೊಡಕುಗಳೂ ಧಾರ್ಮಿಕ ತೊಡಕುಗಳೂ ಕಂಡು ಬಂದಿದ್ದು ಸ್ತ್ರೀಪಾತ್ರಗಳು ಹೇಗೆ ತೊಳಲಾಡುತ್ತವೆಂಬುದನ್ನು ಚಿತ್ರಿಸುತ್ತಾರೆ. ಇಂತಹ ಪರಿಸ್ಥಿತಿಯಲ್ಲಿಯೂ ಸಮೀನಾ, ಜೊಹರಾ ಪಾತ್ರಗಳು ತಮ್ಮತನವನ್ನು ಉಳಿಸಿಕೊಳ್ಳಲು ಬದುಕುವ ಹಕ್ಕಿಗಾಗಿ ಹೋರಾಟ ನಡೆಯಿಸುವುದನ್ನು ಇಲ್ಲಿ ಕಾಣಬಹುದು. ಇವರ 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯಲ್ಲೂ ಇಂತದೇ ಅಂಶಗಳನ್ನು ಹೇಳಲಾಗಿದೆ. ಹೆಣ್ಣು ಸುಶಿಕ್ಷಿತಳಾಗಿರಬೇಕೆಂಬುದನ್ನು ಇವರು ಮತ್ತೆ ಮತ್ತೆ ಒತ್ತಿ ಹೇಳುತ್ತಾರೆ. ಆಗ ಮಾತ್ರ ಇಂತಹ ಸಾಮಾಜಿಕ ಪಿಡುಗುಗಳಿಂದ ಹೊರಬರಲು ಸಾಧ್ಯವೆಂಬುದು ಅವರ ನಿಲುವಾಗಿದೆ.

ಶಶಿಕಲಾ ವಸ್ತ್ರದ ಅವರ ಒಂದು ಕವನದಲ್ಲಿ ವ್ಯಕ್ತಿತ್ವ ದಮನಕ್ಕೆ ಒಳಗಾದ ಒಂದು ಹೆಣ್ಣಿನ ಚಿತ್ರಣ ಕಂಡು ಬರುತ್ತದೆ.

'ಅವ್ವಾ ಅವ್ವಾ ಗೆಣಸ, ಕುಳ್ಯಾಗ ಹಾಕಿ ಕುದಸ
ಕರೀಸೀರಿ ಉಡಸ, ಗಂಡನ ಮನಿಗಿ ಕಳಸ ಅಂತ
ಕುಣಕೊಂತ ಅತ್ತಿ ಮನಿಗಿ ಹೋದ ಹುಡಗಿನ್ನ
ಹೊತ್ತು ಮುಳುಗೋದ್ರಾಗ ಗೆಣಸ ಸುಟ್ಟಂಗ ಸುಟ್ಟಬಿಟ್ರು'

ಎಂಬ ಮಾತುಗಳು ಹೆಣ್ಣಿನ ಜೀವನದ ಅಭದ್ರತೆಯನ್ನು ಸೂಚಿಸುತ್ತವೆ. ಹಾಗೆಯೇ ಅಂತಹವುಗಳ ವಿರುದ್ಧ ಪ್ರತಿಭಟಿಸುತ್ತಾರೆ.

"ಭ್ರಮೆಯ ಲೋಕವನ್ನು ದಾಟಿ, ತಾನೂ ಬದುಕಲೆಂದು ಕಾವ್ಯ ಬಂತು ಬೀದಿಗೆ" ಎಂದು ರಮಜಾನ್ ಗರ್ದರವರು ಬಂಡಾಯ ಸಾಹಿತ್ಯದ ನೆಲೆಯನ್ನು ಹೇಳುತ್ತದೆ.

ದೇವನೂರು ಮಹಾದೇವ ಅವರ 'ಕುಸುಮಬಾಲೆ' ಸ್ವಾತಂತ್ರ್ಯಾನಂತರದ ದಲಿತರ ಜೀವನವನ್ನು ಅವರು ಹಿಂದಿನಿಂದಲೂ ಹೊಂದಿದ ನಂಬಿಕೆಗಳು ಹಾಗು ಸಮಕಾಲೀನ ಸಮಾಜದಲ್ಲಿ ಅದು ಪಡೆದುಕೊಳ್ಳುವ ಬದಲಾವಣೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ದಲಿತ ವರ್ಗದ ಜನರ ನಂಬಿಕೆಗಳು, ಆಚರಣೆಗಳು ಇತರರಿಂದ ಹೇಗೆ ಅನುಮಾನಕ್ಕೆ ಗುರಿಯಾಗಿದೆ ಎಂಬುದನ್ನು ಲೇಖಕರು ಇಲ್ಲಿ ತೆರೆದಿಡುತ್ತಾರೆ. ಜನಪದ ಕಾವ್ಯಗಳಲ್ಲಿ ಕಂಡು ಬರುವಂತ ಜೋತಮ್ಮಗಳನ್ನು ಇಲ್ಲಿ ಬಳಸಿಕೊಂಡದ್ದು ವಿಶೇಷ. ಇದು ಜನಪರ ಆಶಯಗಳನ್ನು ಹೊಂದಿದ ಅಂಶವಾಗಿದೆ. ಸಾಮಾಜಿಕ ಹಾಗು ಸಾಂಸ್ಕೃತಿಕ ಚಿಂತನೆಗಳನ್ನು ಈ ಕಾದಂಬರಿಯಲ್ಲಿ ಒಟ್ಟೊಟ್ಟಿಗೆ ಕಾಣಬಹುದಾಗಿದೆ. ಆರ್ಥಿಕ ಅಸಮಾನತೆಯೂ ಶೋಷಣೆಗೆ ಕಾರಣವಾಗಿರುವುದೆಂದು ಕಾದಂಬರಿ ಧ್ವನಿಸುತ್ತದೆ.

ಮ.ನ.ಜ. ಅವರ 'ಮಾಗಿ' ಕಾದಂಬರಿಯು ದಲಿತ ಜೀವನದ ಖಾಸಗಿ ಅನುಭವಗಳನ್ನು ಬಿಚ್ಚಿಡುತ್ತದೆ. ದಲಿತವರ್ಗದ ನೋವುಗಳು ಇತರರು ಅಂದುಕೊಳ್ಳುವುದಕ್ಕಿಂತಲೂ ಹೇಗೆ ಭೀಕರವಾದುದು, ಅಸಹನೀಯವಾದುದು ಎಂಬುದನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಮಾಗಿಯನ್ನು ಅತ್ಯಂತ ಹೀನಾಯವಾಗಿ ನಡೆಸುಕೊಳ್ಳುವ ಜನ ಅವಳ ವ್ಯಕ್ತಿತ್ವವನ್ನೇ ವಿರೂಪಗೊಳಿಸುತ್ತದೆ. ಎಲ್ಲ ನೋವುಗಳ ನಡುವೆ ತನ್ನತನವನ್ನು ವಳು ಉಳಿಸಿಕೊಳ್ಳುವುದನ್ನು ಇಲ್ಲಿ ಕಾಣಬಹುದು. ಮುಂಬರುವ ಒಳ್ಳೆಯ ದಿನಗಳಿಗಾಗಿ ಅವಳ ಮನಸ್ಸು ಸದಾ ಹಂಬಲಿಸಿರುವುದನ್ನು ಕಾಣಬಹುದು. ಮಾಗಿ ಆ ಜನಾಂಗದ ಎಲ್ಲ ತರಹದ ನೋವುಗಳನ್ನು ಬಿಂಬಿಸುವ ಹಾಗು ಅದನ್ನು ತಣ್ಣಗೆ ಪ್ರತಿಭಟಿಸುವ ಪಾತ್ರವಾಗಿರುವುದನ್ನು ಕಾಣಬಹುದು.

ಸಾಮಾಜಿಕ ಜವಾಬ್ದಾರಿ, ಮಾನವೀಯತೆ, ಈ ಎರಡೂ ನಿಟ್ಟಿನಿಂದ ಚಿಂತಿಸುವ ಸಾಹಿತಿಗಳಲ್ಲಿ ಬರಗೂರು ರಾಮಚಂದ್ರಪ್ಪನವರದು ದೊಡ್ಡ ಹೆಸರು. ಈ ಚಿಂತನೆಗಳೊಟ್ಟಿಗೆ ರಾಜಕೀಯ ಪ್ರಜ್ಞೆಯೂ ಬೆರೆತು ಇವರ ಸಾಹಿತ್ಯವು ವಿಭಿನ್ನವಾಗುತ್ತದೆ. ಊಳಿಗಮಾನ್ಯ ಪದ್ಧತಿ, ಜಮೀನ್ದಾರಿ ಪದ್ಧತಿಗಳಿಂದ ಉಂಟಾದ

ಕ್ರೌರ್ಯಗಳನ್ನು 'ಶೌರ್ಯ' ಕತೆಯಲ್ಲಿ ತೆರೆದಿಡುತ್ತಾರೆ.

ಕಾಲ ಕಾಲಕ್ಕೆ ಬದಲಾಗುವ ಧಾರ್ಮಿಕ ನಂಬಿಕೆಗಳು ಅದರಿಂದ ಉಂಟಾಗುವ ಮುಗ್ಧ ಜನರ ಶೋಷಣೆ ಇವುಗಳನ್ನು 'ಬೆಕ್ಕು' ಕತೆಯಲ್ಲಿ ಕಾಣಬಹುದು.

'ಒಂದು ಊರಿನ ಕತೆ' 'ಮಳೆ' ಮುಂತಾದ ಕತೆಗಳಲ್ಲಿ ಸ್ವಕೀಯ ಪ್ರಜ್ಞೆ ಇದ್ದು ಆಧನಿಕ ಪಾಶ್ಚಾತ್ಯ ನಾಗರೀಕತೆಗಳು ದೇಶೀಯ ಬದುಕನ್ನು ಆಚರಣೆಗಳನ್ನು ಹೇಗೆ ಕಲಕುತ್ತಿವೆ ಎಂಬುದನ್ನು ಅದರ ವಿರುದ್ಧವಾದ ಸಂಘರ್ಷವನ್ನೂ ತೆರೆದಿಡುತ್ತದೆ. ಇವರು ವಿಮರ್ಶಾ ಕ್ಷೇತ್ರದಲ್ಲಿಯೂ ಈ ಬಗೆಯದೇ ಆದ ನಿಲುವನ್ನೇ ವ್ಯಕ್ತಪಡಿಸುತ್ತಾರೆ. 'ಸಂಸ್ಕೃತಿ ಕ್ರಮ ಮತ್ತು ಸೃಜನಶೀಲತೆ' ಎಂಬ ವಿಚಾರ -ಮಿಮರ್ಶೆಯ ಸಂಕಲನದಲ್ಲಿನ ಹಲವಾರು ಲೇಖನಗಳು ದೇಸೀಯತೆಯ ಪ್ರಜ್ಞೆಯಿಂದಲೂ ಶ್ರಮಿಕ ವರ್ಗದ ಪರವಾಗಿಯೂ ಇದೆ. ಗಾಂಧಿ, ಲೋಹಿಯಾ ಮುಂತಾದ ಸಾಮಾಜಿಕ ಶಕ್ತಿಗಳ ಬಗ್ಗೆಯೂ ಅವರ ನಿಲುವುಗಳ ಬಗ್ಗೆಯೂ ಇಲ್ಲಿ ಮಾತನಾಡುತ್ತಾರೆ. 'ಪರಂಪರೆಯೊಂದಿಗೆ ಪಿಸುಮಾತು' ಎಂಬ ವಿಮರ್ಶಾ ಸಂಕಲನದಲ್ಲಿ ದೇಸೀಯತೆಯನ್ನು ಕಾಲಕಾಲಕ್ಕೆ ಬದಲಾಗುವ ಅಂತರಂಗದ ಆಧುನಿಕತೆ ಎಂದು ಗುರುತಿಸುತ್ತಾರೆ. ರಾಜಕೀಯ ಪ್ರಜ್ಞೆಯಿಂದಲೂ, ದೇಸೀಯ ಚಿಂತನೆಗಳಿಂದಲೂ ಬರೆಯುತ್ತಿರುವ ಬರಗೂರರ ಸಾಹಿತ್ಯ ಹಾಗು ವಿಮರ್ಶೆಗಳು ಬಂಡಾಯದ ಹಲವು ಸಾಧ್ಯತೆಗಳನ್ನು ತೆರೆದಿಟ್ಟಿದೆ.

ಬಂಡಾಯ ಸಾಹಿತ್ಯದ ಪ್ರಮುಖ ಕವಿಯಾದ ಡಾ. ಸಿದ್ಧಲಿಂಗಯ್ಯನವರು ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುನಾಡಿನ ಹಾಡು ಮುಂತಾದ ಕವನ ಸಂಕಲನಗಳಿಂದ ಖ್ಯಾತರಾದವರು.

೧೯೭೫ರಲ್ಲಿ ಪ್ರಕಟವಾದ 'ಹೊಲೆಮಾದಿಗರ ಹಾಡು' ಸಂಕಲನದ ಕವನಗಳು ರೋಷದ ಭಾಷೆಯನ್ನು ಒಳಗೊಂಡು ಸುಧಾರಣೆ, ಉದ್ಧಾರ ಎಂಬ ಸಮಾಜದ ಕಣ್ಣೊರೆಸುವ ನೀತಿಯನ್ನು ತಿರಸ್ಕರಿಸಿದ್ದಾರೆ. 'ನನ್ನ ಜನಗಳು' ಕವನದಲ್ಲಿ ದಲಿತರ ಸ್ಥಿತಿಗತಿಗಳ ಚಿತ್ರಣವನ್ನು ನೀಡಿದ್ದಾರೆ. 'ಚಿನ್ನವನ್ನು ತೆಗೆಯೋರು ಅನ್ನವನ್ನು ಕಾಣದೋರು ನನ್ನ ಜನಗಳು' ಎಂದು ತಣ್ಣಗೆ ಪ್ರತಿರೋಧ ವ್ಯಕ್ತ ಪಡಿಸಿರುವಂತೆಯೆ 'ಇಕ್ರಲಾ ಒದೀರ್ಲಾ ಆ ನನ್ ಮಕ್ಕಳಿಗೆ' ಎನ್ನುವ ರೋಷಾವೇಶದ ಕೂಗನ್ನೂ ಇವರಲ್ಲಿ ಕಾಣಬಹುದು.

ನಗರ ಜೀವನವನ್ನು ತಮ್ಮದೇ ಆದ ದೃಷ್ಟಿಕೋನದಲ್ಲಿ ನೋಡುತ್ತಾ ಅದರ ಆಗುಹೋಗುಗಳನ್ನು ಸೂಕ್ಷ್ಮವಾಗಿ ಗ್ರಹಿಸುವ ಸಾಹಿತಿಗಳಲ್ಲಿ ಜಯಂತ ಕಾಯ್ಕಿಣಿಯವರು ಒಬ್ಬರು. ಇವರ 'ತೂಫಾನ್ ಮೇಲ್' ಸಣ್ಣಕತೆಗಳ ಸಂಕಲನದಲ್ಲಿ ಇರುವ ೧೧ ಕತೆಗಳೂ ಮುಂಬೈ ಜೀವನದ ಚಿತ್ರಣದಿಂದ ಕೂಡಿದೆ. ಮಧ್ಯಮವರ್ಗ ಹಾಗು ಕೆಳವರ್ಗದ ಜನರ ಜೀವನಪ್ರೀತಿಯನ್ನು ಇಲ್ಲಿ ಕಾಣಬಹುದು. ಜಾಗತೀಕರಣದ ಪ್ರಭಾವದಿಂದ ನಗರ ಜೀವನದಲ್ಲಿ ಉಂಟಾದ ಸ್ಥಿತ್ಯಂತರಗಳಿಗೆ ಈ ಪುಟ್ಟ ಕುಟುಂಬಗಳು ತತ್ತರಿಸಿ ಹೋಗುವ ಚಿತ್ರಣಗಳಿರುವುದನ್ನು

ಕಾಣಬಹುದು. 'ತೂಫಾನ್ ಮೇಲ್' ಕತೆಯಲ್ಲಿ ಸಹನಟಿಯೊಬ್ಬಳು ಎದುರಿಸುವ ಕೌಟುಂಬಿಕ ಸಮಸ್ಯೆ ಹಾಗು ದುಡಿಮೆಯ ಅನಿವಾರ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಈ ಕತೆಯಂತೆಯೇ ಇಲ್ಲಿನ ಬಹುತೇಕ ಕತೆಗಳು ಬದುಕುವ ಆಸೆ ಹಾಗು ಪ್ರಯತ್ನಗಳು ಬಂಡಾಯವಾಗಿ ಕಂಡು ಬರುತ್ತದೆ. ಹೀಗೆ ನಮ್ಮ ಸಂಸ್ಕೃತಿಯಲ್ಲಿ ವರ್ಷಾನುವರ್ಷದಿಂದ ಜೀವಂತವಾಗಿರುವ ಪ್ರಗತಿಪರ ಆಲೋಚನೆಗಳೂ, ಜನಪರ ಚಿಂತನೆಗಳೂ ಸೇರಿ ಕಾಲಾಂತರದಲ್ಲಿ ರೂಪುಗೊಂಡ ಹೋರಾಟದ ಹಾದಿ 'ಬಂಡಾಯ' ಸಾಹಿತ್ಯದಲ್ಲಿ ಮತ್ತಷ್ಟು ವಿಸ್ತಾರವಾಗಿದೆ ಎನ್ನಬಹುದು. ಇದು ಸಾಹಿತ್ಯ ಹಾಗು ಸಂಘಟನೆಯನ್ನು ಒಟ್ಟಿಗೆ ನಿರ್ವಹಿಸಿಕೊಂಡು ಬಂದಿದೆ. ವ್ಯವಸ್ಥೆಯ ಹುಳುಕುಗಳಿಗೆ ದಬ್ಬಾಳಿಕೆಗಳಿಗೆ ಸೃಜನಶೀಲತೆಯ ಮೂಲಕ ಉತ್ತರವನ್ನು ನೀಡುತ್ತಾ ಬಂದಿದೆ. ಕ್ರಿಯಾಶೀಲವಾದ ಸಾಮಾಜಿಕ ಹೋರಾಟದೊಂದಿಗೆ 'ಬಂಡಾಯ'ದ ಉದ್ದೇಶವಾದ ಸಮಾನತೆಯನ್ನು ಸಾಧಿಸಲು ಪ್ರಯತ್ನಿಸುತ್ತದೆ

ನಾವು ಬದುಕುತ್ತಿರುವ ಈ ಸಮಾಜವು ಹಿಂದಿನಿಂದಲೂ ರೂಢಿಸಿಕೊಂಡು ಬಂದಿರುವ ರಾಜಕೀಯ ನೀತಿ, ಧಾರ್ಮಿಕ ನಿಯಮಗಳು, ಆರ್ಥಿಕ ವ್ಯವಸ್ಥೆ ವೈಯಕ್ತಿಕ ಅಭಿಪ್ರಾಯ, ತಾತ್ವಿಕ ಹಾಗು ವೈಚಾರಿಕ ನಿಲುವುಗಳು ಮುಂತಾದ ಅಂಶಗಳಿಂದ ರೂಪುಗೊಂಡದ್ದು. ಇವುಗಳಿಂದ ಉಂಟಾದ ಭಾವನೆಗಳನ್ನು ವ್ಯಕ್ತಪಡಿಸಲು ಮಾನವ ಬಳಸಿಕೊಂಡ ವಿಶಿಷ್ಟ ಮಾಧ್ಯಮವೇ ಭಾಷೆ. ಭಾಷೆಯು ಅಕ್ಷರ ರೂಪವನ್ನು ಪಡೆಯುವ ಮೊದಲು ಶಾಬ್ದಿಕವಾಗಿ ಬಳಕೆಯಲ್ಲಿದ್ದುದು ತಿಳಿದ ಸಂಗತಿ. ಸಾಹಿತ್ಯವೂ ಹೀಗೆ ಬಾಯಿ ಮಾತಿನಲ್ಲಿ ರೂಢಿಗತವಾಗಿ ರಚನೆಯಾಗುತ್ತಿದ್ದು ಈ ಶಾಬ್ದಿಕ ರಚನೆಗಳು ಯಾರೊಬ್ಬರ ಸೊತ್ತೂ ಆಗದೆ ಎಲ್ಲರ ಭಾವನೆಗಳೂ ಬೆರೆತ ಸಾಹಿತ್ಯವಾಗಿತ್ತು. ಕಾಲಾನಂತರದಲ್ಲಿ ಅವು ಅಕ್ಷರ ರೂಪವನ್ನು ಪಡೆದ ಮೇಲೆಯೂ ಜನಪದವಾಗಿಯೂ ಉಳಿದವು. ಹಾಗೆ ಉಳಿದ ಸಾಹಿತ್ಯವು ಹಲವು ಪರಿವರ್ತನೆಗಳನ್ನು ಹೊಂದಿದವು. ಆಯಾ ಕಾಲಘಟ್ಟದಲ್ಲಿ ಸಮಾಜದಲ್ಲಿ ಆದ ಬದಲಾವಣೆಗಳಿಗೆ ಸ್ಪಂದಿಸಿರುವುದನ್ನು ಕಾಣಬಹುದು. ಉದಾಹರಣೆಗೆ ರಾಮಾಯಣ, ಮಹಾಭಾರತದಂತಹ ಬೃಹತ್ ಕಾವ್ಯಗಳು ಹಲವು ಬದಲಾವಣೆಗಳನ್ನು ಹೊಂದಿ ನೂರಾರು ಬದಲಾವಣೆಗಳನ್ನು ಪಡೆದು ವಿಭಿನ್ನವಾಗಿ ಅಭಿವ್ಯಕ್ತಗೊಂಡಿದೆ. ಲಿಖಿತ ಸಾಹಿತ್ಯದ ಜೊತೆಜೊತೆಗೆ ಬೆಳೆದು ಬಂದ ಈ ಜನಪದ ವಾಹಿನಿಯು ತನ್ನ ಪ್ರಭಾವವನ್ನು ಲಿಖಿತ ಸಾಹಿತ್ಯದ ಮೇಲೆಯೂ ಬೀರಿರುವುದನ್ನು ಕಾಣಬಹುದು. ಕನ್ನಡದ ನವೋದಯ ಕವಿಗಳ ಮೇಲೆ ಈ ಪ್ರಭಾವ ಆಗಿದೆ ಎನ್ನಬಹುದು. ಬೇಂದ್ರೆಯವರ ಕಾವ್ಯವು ಜನಪದ ಶೈಲಿಯನ್ನು ಹೊಂದಿರುವುದು ಇದಕ್ಕೊಂದು ಉದಾಹರಣೆ. ಚಂದ್ರಶೇಖರ ಕಂಬಾರ, ಗಿರೀಶ್ ಕಾರ್ನಾಡ್ ಮೊದಲಾದವರ ನಾಟಕಗಳಲ್ಲಿ ಹೇರಳವಾದ ಜನಪದ ಸಾಹಿತ್ಯದ ಅಂಶವಿರುವುದನ್ನು ಮನಗಾಣಬಹುದು.

ಕಲೆ ಸಾಹಿತ್ಯಗಳು ಸಮಾಜದ ಒಂದು ಭಾಗವಾಗಿದ್ದು, ಇಲ್ಲಿ ತನ್ನ ಸಂಸ್ಕೃತಿಯನ್ನು ಬಿಂಬಿಸಿರುವುದನ್ನು ಕಾಣಬಹುದು. ಎಲ್ಲ ಸಾಂಸ್ಕೃತಿಕ ಅಂಶಗಳ ಜೊತೆಯಲ್ಲಿ ದಬ್ಬಾಳಿಕೆಯ ವಿರೋಧವಾದ ದನಿ ಇಲ್ಲಿಯೂ

ಇರುವುದನ್ನು ಕಾಣಬಹುದು. ಒಂದು ಸಮುದಾಯವು ತನ್ನತನವನ್ನು ಉಳಿಸಿಕೊಳ್ಳಲು ಇತರ ಗುಂಪುಗಳೊಂದಿಗೆ ಮಾಡಿದ ಸಂಘರ್ಷಗಳು ಇದರಲ್ಲಿ ದಾಖಲಾಗಿದೆ. ಇದು ನಿರಂತರವಾಗಿ ಗುಂಪು ಗುಂಪುಗಳ ನಡುವೆ, ದೇಶ ದೇಶಗಳ ನಡುವೆ, ಭಾಷೆ ಭಾಷೆಗಳ ನಡುವೆ, ಜನಾಂಗಗಳ ನಡುವೆ ನಡೆದು ಬಂದು ಮುಂದುವರೆಯುತ್ತಿರುವ ಸಂವಾದವಾಗಿದೆ.

ಈ ಜನಪದ ಕಥೆಗಳಲ್ಲಿ ಗಾದೆ, ಒಗಟು, ಮಹಾಕಾವ್ಯ, ಪ್ರದರ್ಶನ ಕಲೆಗಳಲ್ಲಿ ಪೌರಾಣಿಕ, ಸಾಮಾಜಿಕ, ಚಾರಿತ್ರಿಕವಾದ ವಿಷಯಗಳು ಇವೆ. ಅವುಗಳನ್ನು ಕಲಾತ್ಮಕವಾಗಿ ಸೆರೆ ಹಿಡಿಯಲಾಗಿದೆ. ಇವುಗಳಲ್ಲಿ ಅನೇಕ ಕೃತಿಗಳು ಧರ್ಮ, ಜಾತಿ, ಮುಂತಾದ ವಿಷಯಗಳನ್ನು ಮೀರಿದ 'ಬಂಡಾಯ'ದ ಅಂಶಗಳನ್ನು ಧ್ವನಿಸುತ್ತದೆ. ಜನಪದ ಎಂಬುದು ಈಗ ಬದುಕುತ್ತಿರುವ ಸ್ಥಿತಿಯಾಗಿದ್ದು ಮುಂದೆಯೂ ನಿರಂತರವಾದ ಸಾಮಾಜಿಕ ಸ್ಥಿತಿಯಾಗಿದೆ.

ಜನಪದ ಖಂಡಕಾವ್ಯ 'ನಾಗವ್ವ'ದಲ್ಲಿ ಅಮಾಯಕಳಾದ ಸೀರೆ ಉಡಲೂ ಅರಿಯದ ಚಿಕ್ಕ ಪ್ರಾಯದ ಹೆಣ್ಣು ನಾಗವ್ವನ ಲಗ್ನಕ್ಕೆ ಮುನ್ನವೇ ಗೊತ್ತಾದ ಗಂಡು ತೀರಿಕೊಂಡಾಗ ತಾನು ಅಗ್ನಿಗೆ ಆಹುತಿಯಾಗುವ ದೃಶ್ಯ ಹೃದಯವಿದ್ರಾವಕ. ಸಾಮಾಜಿಕ ಕಟ್ಟುಪಾಡುಗಳು, ಮೂಢನಂಬಿಕೆಗಳು ಅವಳ ಮನಸ್ಸನ್ನು ಸೂಕ್ಷ್ಮಗೊಳಿಸಿದೆ. ಬೆಂಬಲ ನೀಡಬೇಕಾದ ಕುಟುಂಬ ಹಾಗು ಸಮಾಜ ಅವಳನ್ನು ಅಗ್ನಿಗಾಹುತಿ ಮಾಡಬೇಕಾದುದೇ ಧರ್ಮವೆಂದು ತಿಳಿಯುತ್ತದೆ.

'ಚಿಕ್ಕೋಳು ಹಿರಿದಿಮ್ಮವ್ವ' ಅಣ್ಣ ತಂಗಿಯರ ಪ್ರೀತಿ ವಾತ್ಸಲ್ಯವನ್ನು ಸೂಚಿಸುವ ಖಂಡ ಕಾವ್ಯ. ಈ ಖಂಡಕಾವ್ಯವು ಅಂತರ್ಜಾತಿ ಸಂಬಂಧಗಳು ಒಂದು ಕಾಲಘಟ್ಟದಲ್ಲಿ ಹೇಗೆ ನಿಷಿದ್ಧವಾಗಿದ್ದವು ಎಂಬುದನ್ನು ತಿಳಿಸುತ್ತದೆ. ಬೇಡರ ಹುಡುಗನನ್ನು ಹಿರಿದಿಮ್ಮವ್ವ ಪ್ರೀತಿಸಲೂ ಆಗದೆ ದ್ವೇಷಿಸಲೂ ಆಗದೆ ಕೊನೆಗೆ ತನ್ನ ಗಂಡನನ್ನು ಕೊಲೆ ಮಾಡಿದನೆಂಬ ಕಾರಣಕ್ಕೆ ಅವನನ್ನೂ ಕೊಲೆ ಮಾಡುತ್ತಾಳೆ. ಬೇಡರ ಬೊಮ್ಮಲಿಂಗನನ್ನು ಇಲ್ಲಿ ಕ್ರೂರಿಯಾಗಿಯೂ ಚಿತ್ರಿಸಲಾಗಿದೆ. ಹಾಗಾಗಿ ಹಿರಿದಿಮ್ಮವ್ವ ಅವನಿಗೆ ಒಲಿಯುವುದಿಲ್ಲ ಎಂಬುದನ್ನು ಗಮನಿಸಬಹುದು.

ಎಚ್. ಜೆ. ಲಕ್ಕಪ್ಪಗೌಡರು ಸಂಗ್ರಹಿಸಿರುವ 'ಜಾನಪದ ಕಥಾವಳಿ'ಯ 'ಬ್ರಹ್ಮಗಂಟು' ಕತೆಯನ್ನು ನೀತಿ ಕಥೆಗಳ ವಿಭಾಗದಲ್ಲಿ ಸೇರಿಸಲಾಗಿದೆ. ಬ್ರಹ್ಮನ ಪಾತ್ರವನ್ನು ಇಲ್ಲಿ ಸಾಮಾನ್ಯ ಮನುಷ್ಯನಂತೆ ಚಿತ್ರಿಸಲಾಗಿದೆ. ಬ್ರಾಹ್ಮಣ ಹುಡುಗ ಮಾದಿಗರ ಹುಡುಗೀನ ಮದುವೆಯಾಗ್ತಾನೆ ಎಂದು ಬ್ರಹ್ಮ ಹೇಳುತ್ತಾನೆ. ಅದನ್ನು ತಪ್ಪಿಸಿಕೊಳ್ಳಲು ಬ್ರಾಹ್ಮಣರ ಹುಡುಗ ಪ್ರಯತ್ನ ಪಟ್ಟರೂ ಬ್ರಹ್ಮ ಹೇಳಿದಂತೆಯೇ ನಡೆಯುತ್ತದೆ. ಸಾಧಾರಣ ಮನುಷ್ಯನಾದ ಹುಡುಗ ಈ ಬ್ರಹ್ಮನಿಗೆ 'ಇದ ಸುಳ್ಳಾಮಾಡಾಕಾಗಲ್ವ?' ಅಂತ ಕೇಳುತ್ತಾನೆ.  ಕೊನೆಗೆ ಬ್ರಹ್ಮನ ಮಾತನ್ನು ಬ್ರಾಹ್ಮಣ ಹುಡುಗ ನಂಬುವುದರಲ್ಲಿ ಕೊನೆಗೊಳ್ಳುತ್ತದೆ.  ಬ್ರಾಹ್ಮಣರ ಹುಡುಗ ಇದನ್ನು ವಿಧಿ

ಎಂದು ನಂಬುತ್ತಾನಷ್ಟೆ. ಆದರೂ ಅವನು ಅಂತರ್ಜಾತಿ ವಿವಾಹದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಆದರೆ ಆತ ಅದರಲ್ಲಿ ವಿಫಲನಾಗುತ್ತಾನೆ. ಹೀಗೊಂದು ಕಥೆ ಹೆಣೆಯುವ ಸಂದರ್ಭ ನಮ್ಮ ಸಮಾಜದಲ್ಲಿ ರೂಪುಗೊಂಡದ್ದು ಒಂದು ರೀತಿಯ ಬಂಡಾಯವೇ ಸರಿ.

ಜನಪದ ವೀರಕಾವ್ಯಗಳಲ್ಲಿ ಬಂಡಾಯದ ಪ್ರಜ್ಞೆ ಬೇರೆ ಜನಪದ ಕಾವ್ಯಗಳಿಗಿಂತ ಹೆಚ್ಚಾಗಿ ಕಂಡು ಬರುತ್ತದೆ. ದೇಸೀಯತೆಯ ಕಲ್ಪನೆ, ಸ್ವತಂತ್ರ್ಯ ಪ್ರೇಮ, ಈ ಕಾವ್ಯದ ಮುಖ್ಯಾಂಶವಾಗಿರುತ್ತದೆ. ಅಂತಹ ಒಂದು ಅಪೂರ್ವ ಕಾವ್ಯವೇ 'ಪಿರಿಯಾ ಪಟ್ಟಣದ ಕಾಳಗ'. ಈ ಕಾವ್ಯದಲ್ಲಿ ಜಾತಿ, ಮತ, ಧರ್ಮಗಳ ಎಲ್ಲೆಯನ್ನು ಮೀರಿ ಪಿರಿಯಾಪಟ್ಟಣದ ಕೋಟೆಯ ರಕ್ಷಣೆಗೆ ಎಲ್ಲ ವರ್ಗದವರೂ ಹೋರಾಡುವುದನ್ನು ಕಾಣಬಹುದು. ಮೈಸೂರು ಸಂಸ್ಥಾನದವರು ಪಿರಿಯಾಪಟ್ಟಣವನ್ನು ಆಕ್ರಮಿಸಲು ಬಂದಾಗ ಹಲವು ತಂತ್ರಗಳ ಮೂಲಕ ಅವರನ್ನು ಎದುರಿಸುವುದನ್ನು ಕಾಣಬಹುದು. ಇಂತ ದೇಶಪ್ರೇಮದ ಹೋರಾಟದಲ್ಲಿ ಬಂಡಾಯದ ಅಂಶಗಳು ದಟ್ಟವಾಗಿದೆ.

ಇತ್ತೀಚಿನ ದಿನಗಳಲ್ಲಿ ಪ್ರಚಲಿತವಿರುವ ಜನಪದ ಗೀತೆಯೊಂದು ಉದಾರೀಕರಣ ಭಾರತೀಯ ಕಲೆ, ಸಂಸ್ಕೃತಿ, ಜೀವನ ಕ್ರಮದಲ್ಲಿ ಆಗುತ್ತಿರುವ ಏರುಪೇರು ಹಾಗು ಬೌದ್ಧಿಕ ಗುಲಾಮಗಿರಿಯ ವಿರುದ್ಧ ದನಿ ಎತ್ತುತ್ತದೆ.

ಝಣ ಝಣ ಝಣ ಝಣ ಕಾಂಚಣದಲ್ಲಿ
ಅಮೇರಿಕಾದ ಲಾಂಛನದಲ್ಲಿ
ನಾವು ಮಾಯಾ ನಾಳೆ
ನೀವೂ ಮಾಯಾ.................[22]

ಹೀಗೆ ಕಾಲಕಾಲಕ್ಕೆ ಸಾಹಿತ್ಯವು ಸಮಾಜದಲ್ಲಿ ಸಮಾನತೆಯ ಪರಿಕಲ್ಪನೆಯನ್ನು ಬಿತ್ತುತ್ತಾ ಬಂದಿದೆ.

### ಯು. ಆರ್. ಅನಂತಮೂರ್ತಿಯವರ ಕಾದಂಬರಿ ಸಾಹಿತ್ಯದಲ್ಲಿನ ಬಂಡಾಯದ ವೈಚಾರಿಕ ಹಿನ್ನೆಲೆ -ಪ್ರಭಾವ- ಪ್ರತಿಕ್ರಿಯೆ

"ಸಾಹಿತ್ಯ ನಿಂತ ನೀರಾಗಬಾರದೆಂಬುದು ಸಾಹಿತಿಯ ಅಪೇಕ್ಷೆ. ಅದು ಜಡವಾಗ ತೊಡಗಿದಾಗ ಅದರ ಚಲನೆಗಾಗಿ ಪ್ರತಿಭಟನೆ ನಡೆದಿರುತ್ತದೆ. ನವ್ಯರ ಪ್ರತಿಭಟನೆ ಆ ನಿರಂತರ ಕ್ರಾಂತಿಯ ಒಂದು ಸ್ಥಿತಿಯಷ್ಟೆ."

ಈ ನಿಟ್ಟಿನಲ್ಲಿ ಅನಂತಮೂರ್ತಿಯವರ ಐದು ಕಾದಂಬರಿಗಳನ್ನು ಗಮನಿಸಿದಾಗ ಪಾಶ್ಚಾತ್ಯ ಸಾಹಿತ್ಯದ

ವೈಚಾರಿಕ ಹಿನ್ನೆಲೆ ಹಾಗು ಸಮಕಾಲೀನ ಭಾರತೀಯ ಸಮಾಜದ ಸ್ಥಿತಿಗತಿಗಳು ಪ್ರಭಾವ ಬೀರಿದ್ದು ಕತೆಯ ಚೌಕಟ್ಟಿನಲ್ಲಿ ಅವುಗಳಿಗೆ ಪ್ರತಿಸ್ಪಂದಿಸಿರುವುದು ಕಂಡು ಬರುತ್ತದೆ. ಆಯಾ ಕಾಲಘಟ್ಟದ ವ್ಯವಸ್ಥೆಗೆ ಅನುಸಾರವಾಗಿ ಇವು ರೂಪವನ್ನು ಪಡೆದಿರುತ್ತವೆ. ಸಮಾಜದಲ್ಲಿ ಜಡತ್ವವನ್ನು ಪ್ರತಿಪಾದಿಸುವ ವಿಷಯಗಳನ್ನು ಹತ್ತಿಕ್ಕುವ ಪ್ರಯತ್ನವನ್ನು ಹಂತ ಹಂತವಾಗಿ ಕೈಗೊಳ್ಳಲಾಗಿದೆ.

ಕಾಲದ ದೃಷ್ಟಿಯಿಂದ ನವ್ಯತೆ ಎನ್ನುವುದು ಆಂಗ್ಲ ಸಾಹಿತ್ಯದಲ್ಲಿ ೨೦ನೇ ಶತಮಾನದ ಆರಂಭದಿಂದ ಕಂಡು ಬರುವುದೆಂದು ಗುರುತಿಸಲಾಗಿದ್ದರೂ ಕನ್ನಡ ಸಾಹಿತ್ಯಕ್ಕೆ ನವ್ಯತೆಯ ಸ್ಪರ್ಶವಾದದ್ದು ೧೯೫೦ರ ವೇಳೆಗೆ. ಪಾಶ್ಚಾತ್ಯ ನವ್ಯದ ಲಕ್ಷಣಗಳಿಗೂ ಕನ್ನಡದ ನವ್ಯದ ಲಕ್ಷಣಗಳಿಗೂ ಅಲ್ಲಲ್ಲಿ ಹೋಲಿಕೆಗಳಿದ್ದು, ವ್ಯಂಗ್ಯ, ಪ್ರತಿಭಟನೆ, ಮೌಲ್ಯಗಳ ಹುಡುಕಾಟ, ಆಧುನಿಕತೆಯ ಮೆರುಗು, ಸಾಹಿತ್ಯ ತಂತ್ರಗಳು, ಭಾಷೆಯಲ್ಲಿ ಹೊಳಪು ಇವು ಎರಡು ಕಡೆಯೂ ಇರುವಂತಹ ಅಂಶಗಳು. ಪಾಶ್ಚಾತ್ಯರಲ್ಲಿ ಉದಾರಹಣೆಗೆ ಟಿ. ಎಸ್. ಎಲಿಯಟ್, ಆಲ್ಬರ್ಟ್ ಕಾಮೂ ಇತ್ಯಾದಿ ನವ್ಯರ ನವ್ಯತೆ ಕಾಣಿಸಿಕೊಂಡ ಹಲವು ವರ್ಷಗಳ ನಂತರ ಕನ್ನಡದಲ್ಲಿ ಇದು ರೂಪುಗೊಂಡಿತು. ಅದಕ್ಕೆ ಬೇಕಾದ ಸಾಮಾಜಿಕ ಸನ್ನಿವೇಶ ಇಲ್ಲಿ ೧೯೫೦ರ ವೇಳೆಗೆ ರೂಪುಗೊಳ್ಳತೊಡಗಿತ್ತು. ಹೀಗೆ ಪ್ರಾರಂಭವಾದ ಕನ್ನಡ ನವ್ಯ ಸಾಹಿತ್ಯದ ಪ್ರಾರಂಭದ ಕಾದಂಬರಿಕಾರರಾದ ವಿ.ಕೆ. ಗೋಕಾಕ್, ರಾಮಚಂದ್ರಶರ್ಮ (ಸಣ್ಣ ಕತೆಗಳು), ರಾಮಾನುಜನ್, ಯಶವಂತ ಚಿತ್ತಾಲ ಮೊದಲಾದ ಕಾದಂಬರಿಕಾರರು ಬರೆಯುತ್ತಿದ್ದ ಸಂದರ್ಭದಲ್ಲಿಯೇ ಯು. ಆರ್. ಅನಂತಮೂರ್ತಿಯವರ ಸಂಸ್ಕಾರ (೧೯೬೫) ಪ್ರಕಟವಾಯಿತು. ಇವರ ಕಾದಂಬರಿಯಲ್ಲೂ ನವ್ಯತೆ ಮಡುಗಟ್ಟಿ ನಿಂತಿರುವುದನ್ನು ಗಮನಿಸಬೇಕು. ಇದರ ಜೊತೆಗೆ, ಭಾರತೀಯ ಸಮಾಜದಲ್ಲಿ ಈಗಾಗಲೇ ಅಸ್ತಿತ್ವದಲ್ಲಿದ್ದ ಗಾಂಧಿ, ಲೋಹಿಯಾ, ಅಂಬೇಡ್ಕರ್ ಮುಂತಾದವರ ವಿಚಾರಧಾರೆಗಳು ಸಮಾಜದಲ್ಲಿ ತೀವ್ರತರ ಬದಲಾವಣೆಗಳನ್ನು ತಂದವು. 'ಸಂಸ್ಕಾರ' ಕಾದಂಬರಿಯ ಮೇಲೆಯೂ ಇವು ಪ್ರಭಾವ ಬೀರಿದವು.

ನವ್ಯ ಸಾಹಿತ್ಯದ ಮತ್ತೊಂದು ಮುಖ್ಯ ಅಂಶವಾದ ವ್ಯಕ್ತಿನಿಷ್ಠತೆಯು ಅನಂತಮೂರ್ತಿಯವರ ಕಾದಂಬರಿಯಲ್ಲಿ ಕಂಡು ಬಂದರೂ, ಅದನ್ನು ಸಾಮಾಜಿಕ ಸನ್ನಿವೇಶದ ಮೂಲಕ ನೋಡಬಹುದಾಗಿದೆ. ಇದು 'ಸಂಸ್ಕಾರ'ದ ತಂತ್ರದಲ್ಲಿಯೇ ಇರುವುದನ್ನು ಗುರುತಿಸಬಹುದು. ಮೌಲ್ಯಗಳನ್ನು ವಿಮರ್ಶಿಸಿ, ಪ್ರಶ್ನಿಸಿ, ಉತ್ತರ ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಿದೆ. ಪಾತ್ರಗಳು ಕೇವಲ ನೆಪವಾಗಿ, ಹಳೆಯ ಮೌಲ್ಯಗಳನ್ನು ಆಧುನಿಕ ಮನಸ್ಸು ಪ್ರಶ್ನಿಸುವ ರೀತಿಯಲ್ಲಿ ಇಡೀ ಕಾದಂಬರಿ ರೂಪುಗೊಂಡಿದೆ. ಎಂದರೆ ಇಲ್ಲಿಯ ನವ್ಯತೆ, ಕತೆಯ ವಸ್ತು ಹಾಗೂ ತಂತ್ರದಲ್ಲಿ ಮಾತ್ರವಲ್ಲದೆ ಆ ಸಂದರ್ಭಕ್ಕೆ ಸ್ಪಂದಿಸುವ ಲೇಖಕನ ಮನಸ್ಸನ್ನೂ ತೋರ್ಪಡಿಸುತ್ತದೆ. ಏಕಕಾಲಕ್ಕೆ ಪಾಶ್ಚಾತ್ಯ ನವ್ಯ ಸಾಹಿತ್ಯವನ್ನೂ, ಭಾರತೀಯ ಮನಸ್ಸನ್ನೂ ಪ್ರತಿಫಲಿಸುತ್ತದೆ. ಪ್ರಾಣೇಶಾಚಾರ್ಯರ ಪಾತ್ರವನ್ನು ಕನ್ನಡ ನವ್ಯ ಸಾಹಿತ್ಯದ ವ್ಯಕ್ತಿಕೇಂದ್ರಿತ ನೆಲೆಯಲ್ಲಿ ನಿಂತು ನೋಡಲಾಗಿದೆ. ನಾರಣಪ್ಪನ ಪಾತ್ರವೂ ಹಾಗೆಯೇ. ತಮ್ಮ ಜೀವನದ ಧ್ಯೇಯೋದ್ದೇಶಗಳನ್ನು ಹುಡುಕಾಡುತ್ತವೆ. ಸಂಸ್ಕೃತಿ ಜನ್ಯ ಮೌಲ್ಯಗಳು ವ್ಯಕ್ತಿಯೊಬ್ಬನನ್ನು ರೂಪಿಸುವುದು ಒಂದು ಬಗೆಯಾದರೆ, ವೈಯಕ್ತಿಕ ಭಾವನೆಗಳು ಆ

ಮೌಲ್ಯಗಳನ್ನು ದಾಟಿ ಹೊಸ ಮೌಲ್ಯಗಳನ್ನು ಕಟ್ಟಿಕೊಳ್ಳಲು ತೊಡಗುತ್ತದೆ. ಇಂತಹ ಅಂಶವು ಕಾದಂಬರಿಯ ಹಿನ್ನೆಲೆಯಾಗಿದೆ. ಈ ವೈಯಕ್ತಿಕ ಭಾವನೆಗಳು ಸಮಾಜದ ಆಗುಹೋಗುಗಳಿಂದ ರೂಪುಗೊಂಡಿದ್ದು ಸಂಸ್ಕೃತಿಜನ್ಯ ಮೌಲ್ಯಗಳು ಇದರೊಂದಿಗೆ ನಡೆಸುವ ಸಂವಾದ, ಸಂಘರ್ಷಗಳ ಪರಿಣಾಮದಿಂದಾಗಿ ಆಗುವ ಬದಲಾವಣೆಗಳು ವೈಯಕ್ತಿಕ ನೆಲೆಯಲ್ಲಿ ಬಂಡಾಯವೆನಿಸಿಕೊಳ್ಳುತ್ತದೆ. ಮತ್ತೊಂದು ನಿಟ್ಟಿನಲ್ಲಿ ಈ ಕಾದಂಬರಿಯಲ್ಲಿ ವ್ಯಕ್ತವಾಗಿರುವ ಸಮಾಜವು ಸ್ವತಂತ್ರ್ಯ ಪೂರ್ವ ಭಾರತದ ಹಳ್ಳಿಯೊಂದರ ಚಿತ್ರಣವಾಗಿದ್ದು, ಅಲ್ಲಿ ಗಾಂಧಿ, ಲೋಹಿಯಾ, ರಾಯ್, ಅಂಬೇಡ್ಕರ್ ಮೊದಲಾದವರ ವಿಚಾರಗಳು ಅಂದಿನ ಸಮಾಜದ ಮೇಲೆ ಬೀರಿದ ಪ್ರಭಾವವು ಸಾಮಾಜಿಕ ಅಸಮಾನತೆಯ ವಿರುದ್ಧವಾಗಿದೆ.

ಭಾರತೀಯ ಮೂಲದ ಸಾಮಾಜಿಕ ಅಂಶಗಳು ಈ ಕಾದಂಬರಿಯ ಬಂಡಾಯದ ನಿಜವಾದ ನೆಲೆಯಾಗಿದೆ. ನವ್ಯದ ವ್ಯಕ್ತಿನಿಷ್ಠತೆಯೂ ಬಂಡಾಯ ಸಾಹಿತ್ಯದ ಜನಪರತೆಯೂ ಇಲ್ಲಿ ಮಿಳಿತವಾಗಿದೆ. ಎರಡೂ ನೆಲೆಯಿಂದ ಬಂಡಾಯದ ಪ್ರಕ್ರಿಯೆ ಉಂಟಾಗಿದೆ. ಸಮಾಜವನ್ನು ವೈಚಾರಿಕ ಲೋಕಕ್ಕೆ ಕರೆದೊಯ್ಯುವಂತೆ ತಂತ್ರಗಳನ್ನು ಬಳಸಲಾಗಿದೆ. ಒಳ್ಳೆಯ-ಕೆಟ್ಟ ಗುಣಗಳೆರಡನ್ನೂ ಒಂದೇ ವ್ಯಕ್ತಿಯಲ್ಲಿ ತೋರಿಸುತ್ತಾ ಓದುಗರನ್ನು ಜಿಜ್ಞಾಸೆಗೆ ತಳ್ಳುತ್ತದೆ. ವ್ಯಕ್ತಿ ಮತ್ತು ಸಮಾಜ ಈ ಎರಡು ನಿಟ್ಟಿನಲ್ಲಿ ಬಂಡಾಯ ಎಂಬುದರ ಅರ್ಥವು ಸ್ವಲ್ಪ ಬದಲಾಗುತ್ತದೆ. ವೈಯಕ್ತಿಕ ಜೀವನದಲ್ಲಿ ಆಗುವ ಬದಲಾವಣೆಗಳು 'ಬಂಡಾಯ' ಎಂಬ ಜನಪರವಾದ ಅಂಶಗಳನ್ನು ಹೊಂದಿರದೇ ಹೋಗಬಹುದು. ಆದರೆ ಪ್ರಾಣೇಶಾಚಾರ್ಯರಂತಹ ವ್ಯಕ್ತಿ ತನ್ನ ವೈಯಕ್ತಿಕ ಜೀವನದಲ್ಲಿ ಪಡೆದುಕೊಳ್ಳುವ ಬದಲಾವಣೆಗಳು ಸಮಾಜಕ್ಕೆ ಮಾದರಿಯಾಗತೊಡಗುತ್ತದೆ. ಸಮಾಜಕ್ಕೂ ವ್ಯಕ್ತಿಗೂ ಹೀಗೊಂದು ಸಂಪರ್ಕವನ್ನು ಸಾಧಿಸಿ, ಪ್ರಾಣೇಶಾಚಾರ್ಯರನ್ನೂ ಸಮಾಜದ ಒಂದು ಭಾಗವೆಂದು ಪರಿಗಣಿಸಿ 'ಸಂಸ್ಕಾರ'ವನ್ನು ರಚಿಸಲಾಗಿದೆ. ಒಂದೆಡೆ ಈಗಾಗಲೇ ಪಾಶ್ಚಾತ್ಯ ಸಾಹಿತ್ಯದಲ್ಲಿ ಬಳಕೆಯಲ್ಲಿದ್ದ ನವ್ಯವಾದ, ಮತ್ತೊಂದೆಡೆ ಭಾರತದಲ್ಲಿ ರೂಪುಗೊಳ್ಳುತ್ತಿದ್ದ ಸಮಾಜವಾದ ಹಾಗೂ ಪ್ರಾಣೇಶಾಚಾರ್ಯರ ಮೂಲಕ ಯು. ಆರ್. ಅನಂತಮೂರ್ತಿಯವರು ರೂಪಿಸಿದ ವೈಚಾರಿಕತೆ ಇವುಗಳು ಕಾದಂಬರಿಯ ಅಂಶಗಳಾಗಿವೆ. ನವ್ಯವಾದ ಹಾಗೂ ಭಾರತೀಯ ಸಮಾಜವಾದ ಇವುಗಳನ್ನು ಸಂಪ್ರದಾಯಬದ್ಧವಾದ ಮನಸ್ಸು ಹೇಗೆ ಸ್ವೀಕರಿಸುತ್ತದೆ ಎನ್ನುವುದು ಮುಖ್ಯ ಅಂಶವಾಗಿದೆ. ನಾರಣಪ್ಪನ ಪಾತ್ರದ ಮೂಲಕ ಮಾನವನ ಸುಪ್ತ ಬಯಕೆಗಳ ತೀವ್ರತರ ಚಿತ್ರಣವನ್ನು ಮೂಡಿಸಿದ್ದಾರೆ. ನಾರಣಪ್ಪ ತನ್ನ ಅತಿರೇಕಗಳಿಂದ ಸೋತು, ಸಾವನ್ನು ಹೊಂದಿದರೆ, ಪ್ರಾಣೇಶಾಚಾರ್ಯರು ನಾರಣಪ್ಪನ ರೀತಿ ನೀತಿಗಳನ್ನು ಅನುಸರಿಸಲು ಮುಂದಾಗುತ್ತಾರೆ. ಆದರೂ ಅಗ್ರಹಾರದ ಇತಿಮಿತಿಗಳೊಳಗೆ ವರ್ತಿಸಬೇಕಾಗುತ್ತದೆ.

ಅನಂತಮೂರ್ತಿಯವರ ಮತ್ತೊಂದು ಕಾದಂಬರಿಯಾದ 'ಭಾರತೀಪುರ'ದಲ್ಲಿ ಪಾಶ್ಚಾತ್ಯ ಹಾಗೂ ಭಾರತೀಯ ಚಿಂತನೆಗಳು ಮಿಳಿತಗೊಂಡಿದೆ. ಪಾಶ್ಚಾತ್ಯರಿಂದ ಭಾರತದಲ್ಲಿ ಉಂಟಾದ ಆಧುನಿಕತೆಯ ಸವಲತ್ತುಗಳನ್ನು ಇಲ್ಲಿ ಪ್ರಶ್ನಿಸಲಾಗುತ್ತದೆ. ಗಾಂಧೀಜಿಯವರ ಜೀವನ ತತ್ವಗಳ ಮೂಲಕ ಪಾಶ್ಚಾತ್ಯ ಚಿಂತನೆಗಳು ಎಷ್ಟು ಜನಪರವಾಗಿದೆ ಎಂಬುದನ್ನು ಪರೀಕ್ಷಿಸಿದ್ದಾರೆ.

ಭಾರತದ ಸಮಾಜದಲ್ಲಿ ೧೯೭೦ರ ವೇಳೆಯಲ್ಲಿ ಇದ್ದ ರಾಜಕೀಯ ಪರಿಸ್ಥಿತಿ ಈ ಕಾದಂಬರಿಯ ಹಿನ್ನೆಲೆಯಾಗಿದೆ. "ಭಾರತೀಪುರ"ವನ್ನು ಪ್ರಜ್ಞಾಪೂರ್ವಕ ವಿಚಾರವಾದಿ ನಿಲುವಿನಿಂದಲೆ ಬರೆಯುವುದೆಂದು ನಿಶ್ಚಯಿಸಿ ಹೊರಟಿದ್ದೆ. ಪಾಶ್ಚಾತ್ಯ ವಿದ್ಯಾಭ್ಯಾಸ ಪಡೆದ ನನ್ನ ಕಾದಂಬರಿಯ ನಾಯಕ ಜಗನ್ನಾಥ ತನ್ನ ದೇವಸ್ಥಾನದ ಕಿರುಪಟ್ಟಣವಾದ ಭಾರತೀಪುರಕ್ಕೆ ಹಿಂದಿರುಗುತ್ತಾನೆ. ಇಂತಹ ಜಗತ್ತಿನಲ್ಲಿ ತನ್ನ ವ್ಯಕ್ತಿತ್ವಕ್ಕೆ, ಸ್ಪಷ್ಟರೂಪ ಕೊಡಲು ಯತ್ನಿಸುತ್ತಾನೆ. ತನ್ನ ಬಾಲ್ಯದ ಒಬ್ಬ ನೈಜ ಮನುಷ್ಯನಾಗಲು ಬಯಸುತ್ತಾನೆ. ಅಂದರೆ ಈ ಪಟ್ಟಣದ ನಿವಾಸಿಗಳ ಆರ್ಥಿಕ ಜೀವನವನ್ನೂ, ಭಾವ ಜೀವನವನ್ನೂ ಕಟ್ಟುವ ಸ್ಥಳದ ದೇವರ ಪ್ರಭೆಯನ್ನು ನಾಶಮಾಡದ ಹೊರತು ಹೀಗೆ ಎಲ್ಲರೂ ಗಟ್ಟಿಯಾಗಿ ಅವರವರ ಅದೃಷ್ಟಕ್ಕೆ ಎದುರಾಗುವುದು ಅಸಾಧ್ಯವೆಂದು ಮನಗಾಣುತ್ತಾನೆ."[23] ಎಂದು ಯು. ಆರ್. ಅನಂತಮೂರ್ತಿಯವರೇ ತಮ್ಮ ಲೇಖನವೊಂದರಲ್ಲಿ ತಿಳಿಸುತ್ತಾರೆ.

ಆಧುನಿಕ ಮನಸ್ಸುಗಳು ತೊಳಲಾಟದಲ್ಲಿ ತೊಡಗುವುದನ್ನು ಇಲ್ಲಿ ಕಾಣಬಹುದು. ಆಧುನಿಕ ಸವಲತ್ತುಗಳು ಈ ಪಟ್ಟಣಕ್ಕೆ ಬೇಕೆ-ಬೇಡವೆ? ಮಂಜುನಾಥನನ್ನು ದೇವರೆಂದು ಪೂಜಿಸಬೇಕೆ ಅಥವಾ ದಬ್ಬಾಳಿಕೆಯ ಪ್ರತೀಕವೆಂದು ಭಾವಿಸಿ ಅದನ್ನು ವಿಸರ್ಜಿಸಬೇಕೆ? ಪಾಶ್ಚಾತ್ಯ ಮಾದರಿಯ ಆರ್ಥಿಕ, ಸಾಮಾಜಿಕ ಬೆಳವಣಿಗೆ ಆಗಬೇಕೆ ಅಥವಾ ಈ ವಿಷಯದಲ್ಲಿ ಗಾಂಧೀವಾದವನ್ನು ಅನುಸರಿಸಬೇಕೆ? ಗಾಂಧಿಯವರ ಆರ್ಥಿಕ ನೀತಿಯನ್ನು ಅಳವಡಿಸಿಕೊಳ್ಳುವುದು ಎಷ್ಟು ಸರಿ? ಲೋಹಿಯಾರವರ ಸಮಾಜವಾದವನ್ನು ಭಾರತದ ಹಳ್ಳಿಯೊಂದರಲ್ಲಿ ಪ್ರಯೋಗಿಸಲು ಸರಿಯಾದ ಸಮಯವೆ? ಎಂಬಂತಹ ವಿಚಾರಗಳು ಕಾದಂಬರಿಯಲ್ಲಿ ಬಂಡಾಯದ ಹಿನ್ನೆಲೆಯಾಗಿದೆ. ಈ ಅಂಶಗಳ ಪ್ರಭಾವದಿಂದಾಗಿ ಭಾರತೀಪುರದ ನಾಯಕ ಜಗನ್ನಾಥ ತಾನಿರುವ ಸಮಾಜದೊಳಗೆ ಚೈತನ್ಯವನ್ನು ತುಂಬಬೇಕೆಂದು ಹಂಬಲಿಸುತ್ತಾನೆ. ವಿಚಾರವಾದ ಮತ್ತು ರಾಜಕೀಯ ಕ್ರಾಂತಿಯನ್ನು ಈ ಪುಟ್ಟ ಪಟ್ಟಣದಲ್ಲಿ ಪ್ರಯೋಗ ಮಾಡುತ್ತಾನೆ. ಭಾರತೀಪುರದ ಸಮಾಜ ಹಲವು ವರ್ಗಗಳಿಂದ ಕೂಡಿದ್ದು, ವರ್ಣಭೇದ ನೀತಿಯನ್ನು ಅನುಸರಿಸುತ್ತದೆ. ಅದನ್ನು ನಿವಾರಿಸಲು ಪ್ರಜ್ಞಾಪೂರ್ವಕವಾದ ಪ್ರಯತ್ನಗಳನ್ನು ಜಗನ್ನಾಥ ಕೈಗೊಳ್ಳುತ್ತಾನೆ. ಗಾಂಧೀಜಿಯವರ ಅಸ್ಪೃಶ್ಯತಾ ವಿರೋಧಿ ನೀತಿಯನ್ನು ಇಲ್ಲಿ ಬಳಸುತ್ತಾನೆ. ಅದಕ್ಕೆ ಪ್ರತಿಕ್ರಿಯೆಯಾಗಿ ಆ ಸಮಾಜ ಸ್ಪಂದಿಸುವ ರೀತಿಯಲ್ಲಿ ಬಂಡಾಯದ ಅಂಶಗಳನ್ನು ಕಾಣಬಹುದು. ಇಲ್ಲಿಯ ನಾಯಕನಾದ ಜಗನ್ನಾಥನ ಬಗ್ಗೆ ರಾಜಕೀಯ ಮುಖಂಡರ ಬಗ್ಗೆ ಕ್ರಾಂತಿಕಾರಿಗಳ ಬಗ್ಗೆ ಜನಸಾಮಾನ್ಯರು ಹೊಂದಿದ ಅಪನಂಬಿಕೆಯು ಒಂದು ದೃಷ್ಟಿಯಲ್ಲಿ ಅವನ ಬಂಡಾಯವನ್ನು ಪ್ರಶ್ನಿಸಿದರೆ ಮತ್ತೊಂದು ದೃಷ್ಟಿಯಲ್ಲಿ ರಾಜಕೀಯ, ಸಮಾಜ ಸುಧಾರಣೆ, ಸಮಾನತೆ ಮುಂತಾದ ಕ್ರಾಂತಿಗಳ ಬಗ್ಗೆ ಅದೇ ಜನರಿಗೆ ಇರುವ ಅಲ್ಪಜ್ಞಾನವನ್ನು ತೋರಿಸುತ್ತದೆ. ಆದರೂ ಜಗನ್ನಾಥನನ್ನು ಕುರುಡಾಗಿ ಹಿಂಬಾಲಿಸುವ ಜನರ ಗುಂಪೊಂದು ಇದೆ.

ಜಗನ್ನಾಥ ವೈಚಾರಿಕ ವ್ಯಕ್ತಿಯಾಗಿ ಉಳಿಯುತ್ತಾನೆ. ಅವನಿಗೆ ಮಂಜುನಾಥಸ್ವಾಮಿಯು 'ಜೀವನ ಕ್ರಮದ ಕ್ಯಾನ್ಸರ್' ಎಂದೆನಿಸುತ್ತದೆ. 'ದೇವರನ್ನು ನಾಶ ಮಾಡದ ಹೊರತು ಖಂಡಿತಾ ಕ್ರಿಯೆಟಿವ್ ಆಗಲಾರೆವು' ಎಂದೆನಿಸುತ್ತದೆ.

ತನ್ನ ವೈಚಾರಿಕತೆಯ ಹಿಡಿತದಿಂದಲೇ ಜಗನ್ನಾಥ ತನ್ನತನವನ್ನು ಕಳೆದುಕೊಂಡಂತೆ ಕಾದಂಬರಿಯಲ್ಲಿ ಭಾಸವಾಗುತ್ತದೆ. ಯಾವುದನ್ನು ಜಗನ್ನಾಥ ಬಂಡಾಯವೆಂದು ಭಾವಿಸುತ್ತಾನೆಯೋ ಅದರ ಪ್ರಭಾವವು ಕಾರ್ಯರೂಪಕ್ಕೆ ಇಳಿದ ಮೇಲೆ ಪುರಾಣದ ಕತೆಯಂತಾಗುತ್ತದೆ. ಮಂಜುನಾಥನ ವಿಗ್ರಹವನ್ನು ಕಿತ್ತು ನೀರಿಗೆ ಎಸೆದ ಸನ್ನಿವೇಶವನ್ನು ಆ ಸಮಾಜ 'ದೇವರು ಮೈಲಿಗೆಯಾಗುತ್ತೇನೆಂದು ತಿಳಿದು ನೀರಿಗೆ ಮುಳುಗಿದನೆಂದು'ಮತ್ತೊಂದು ಮೂಢನಂಬಿಕೆಯನ್ನು ಕಟ್ಟಿಕೊಳ್ಳುತ್ತಾರೆ. ಎಂದರೆ ಪಾಶ್ಚಾತ್ಯ ಚಿಂತನೆಗಳನ್ನು ಸ್ವೀಕರಿಸಿ ಅನುಭವಿಸುವಷ್ಟು ಅನಿವಾರ್ಯತೆ ಇನ್ನೂ ಬಂದಿಲ್ಲದ ಕಾರಣದಿಂದಾಗಿ ನಾಲ್ಕಾರು ಜನ ಯುವಕರು ಸ್ಪಂದಿಸಿದರೂ ಫಲಕಾರಿಯಾಗುವುದಿಲ್ಲ. ವಿಚಾರವಾದ ಹಾಗೂ ರಾಜಕೀಯ ಕ್ರಾಂತಿ ಎರಡನ್ನೂ ಇಲ್ಲಿ ಪರೀಕ್ಷೆಗೆ ಒಡ್ಡಲಾಗಿದೆ. ಈ ಕಾದಂಬರಿ ಪ್ರಕಟವಾಗುವ ವೇಳೆಗೆ ಕರ್ನಾಟಕದಲ್ಲಿ ದಲಿತಪರ ಚಳವಳಿ ನಡೆಯುತ್ತಿದ್ದು ಆ ಅಂಶಗಳೂ ಕಾದಂಬರಿಗೆ ತಕ್ಷಣದ ಪ್ರಭಾವವನ್ನು ಬೀರಿದೆ ಎಂದೆನಿಸುತ್ತದೆ. ಸಂಪ್ರದಾಯಬದ್ಧ ಸಮಾಜವನ್ನು ಆಧುನೀಕರಣಗೊಳಿಸುವ ನಿಟ್ಟಿನಲ್ಲಿ ಕಾದಂಬರಿ ಪ್ರಯತ್ನಿಸುತ್ತದೆ. ಗಾಂಧಿ, ಲೋಹಿಯಾ ಮುಂತಾದವರ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡ ಜಗನ್ನಾಥ ಹಾಗು ಅವನನ್ನು ತಮ್ಮ ಮುಂದಾಳೆಂದು ತಿಳಿಯುವ, ಹಿಂಬಾಲಿಸುವ ಸಮಾಜದ ಸ್ಥಿತಿಯನ್ನು ಭಾರತೀಪುರದಲ್ಲಿ ಕಾಣಬಹುದು. ಜಗನ್ನಾಥನ ಬಂಡಾಯವನ್ನು ಕುರುಡಾಗಿ ಹಿಂಬಾಲಿಸುವ ಗುಂಪುಗಳು ಕೊನೆಕೊನೆಗೆ ಮೂಢನಂಬಿಕೆಗೆ ತಲೆಬಾಗುತ್ತವೆ.

'ಭಾರತೀಪುರ'ದ ತರುವಾಯ ಪ್ರಕಟವಾದ 'ಅವಸ್ಥೆ' ಕಾದಂಬರಿಯ ಬಂಡಾಯದ ಹಿನ್ನೆಲೆಯು ಪೂರ್ಣವಾಗಿ ಭಾರತೀಯ ಸಮಾಜವಾದದಿಂದ ರೂಪುಗೊಂಡದ್ದಾಗಿದೆ. ಗಾಂಧೀವಾದ ಮತ್ತು ಲೋಹಿಯಾವಾದ ಈ ಕಾದಂಬರಿಯ ಅಂತರಾತ್ಮವಾಗಿದೆ. ಕೃಷ್ಣಪ್ಪ ಇಲ್ಲಿಯ ನಾಯಕ. ಅವನ ಸಮಾಜವಾದಿ ವಿಚಾರಗಳು ಜನಪರವಾಗಿದ್ದು ಅದು ರೂಪಾಂತರ ಹೊಂದುತ್ತದೆ.

ಈ ಕಾದಂಬರಿಯ ಮತ್ತೊಂದು ಪಾತ್ರವಾದ ನಾಗರಾಜು ಕಾದಂಬರಿಯ ಉದ್ದಕ್ಕೂ ಕೃಷ್ಣಪ್ಪನೊಂದಿಗೆ ಬೆಳೆಯುತ್ತಾ ಹೋಗುತ್ತಾನೆ. ಕೃಷ್ಣಪ್ಪನನ್ನು ಪ್ರಶ್ನಿಸುವಂತೆ ಕಾಣುವ ನಾಗರಾಜು ನಿಜವಾಗಿ ಕೃಷ್ಣಪ್ಪನ ಈ ಸಮಾಜವಾದಕ್ಕೆ ನೆಲೆ ಇದೆಯೆಂದು ತಿಳಿದು ಅಲ್ಲಿ ಕ್ರಿಯಾಶೀಲನಾಗುತ್ತಾನೆ. ಆದರೆ ಅಲ್ಲಿಯ ಅವ್ಯವಹಾರಗಳಿಗೆ ತನ್ನನ್ನು ಒಡ್ಡಿಕೊಳ್ಳಲಾರದೆ ರಾಜಿನಾಮೆಯನ್ನು ನೀಡುತ್ತಾನೆ. ಹಿನ್ನೆಲೆಯಲ್ಲಿ ಇರುವ 'ಅವಸ್ಥೆ'ಯ ಸಮಾಜ ಇದೆಲ್ಲವನ್ನೂ ಸ್ವೀಕರಿಸುತ್ತಾ ಹೋಗುತ್ತದೆಯಷ್ಟೆ. ಪ್ರಜಾಪ್ರಭುತ್ವ ಬಂದ ನಂತರ ಸಮಾನತೆ ರಾಜಕೀಯ ಹಂತದಲ್ಲಿ ಇದೆ ಎಂದು ಹೇಳಲಾದರೂ ಅದನ್ನು ಮೀರಿ ವ್ಯಕ್ತಿಯ ಮಟ್ಟದಲ್ಲಿ ಪ್ರತ್ಯೇಕವಾದ ಮನ್ನಣೆಯು ಮುಖ್ಯವಾಗುತ್ತದೆ. ಹಾಗಾಗಿಯೆ ಕೃಷ್ಣಪ್ಪ ಗಾಂಧೀವಾದವನ್ನು ನಂಬಿ ಹಳ್ಳಿಗೆ ತೆರಳಿದರೂ ಅದರಲ್ಲಿ ತನ್ನ ವೈಯಕ್ತಿಕ ಆಸೆ ಅಭಿಲಾಷೆಗೂ ಬೆಲೆ ಕೊಡುತ್ತಾನೆ. ಸೈದ್ಧಾಂತಿಕ ಹಾಗು ಕಾರ್ಯರೂಪಕ್ಕಿಳಿಸುವ ಎರಡೂ ನಿಟ್ಟಿನ ಬಂಡಾಯವನ್ನು ಇಲ್ಲಿ ಗುರುತಿಸಬಹುದು. ರೈತ ಚಳವಳಿ, ಮಾರ್ಕ್ಸ್‌ವಾದ, ಗಾಂಧಿವಾದ, ಲೋಹಿಯಾವಾದ ಮುಂತಾದ ಅಂಶಗಳು ಒಂದಕ್ಕೊಂದು ಮುಖಾಮುಖಿಯಾಗುತ್ತದೆ. ಸುತ್ತಲಿನ ಸಮಾಜದ

ಚಲನೆಯನ್ನು ತೀವ್ರಗೊಳಿಸುತ್ತದೆ. ಇಂತಹ ಹಲವು ವಾದಗಳ ವಿಚಾರಗಳು ಕಾದಂಬರಿಯ ಮೂಲಾಂಶವಾಗಿ ಬಂಡಾಯದ ಪ್ರಭಾವವನ್ನು ಬೀರುತ್ತದೆ. ಇದಲ್ಲದೆ ಕಾದಂಬರಿಯು ಪ್ರಕಟವಾದ ಸಂದರ್ಭದಲ್ಲಿ ಕರ್ನಾಟಕದಲ್ಲಿ ತೀವ್ರವಾಗಿದ್ದ ಬಂಡಾಯ ಚಳವಳಿಯು ಕಾದಂಬರಿಯಲ್ಲಿ ಬಂಡಾಯದ ಅಂಶಗಳು ಸೇರಲು ಕಾರಣವಾಗಿದೆ. ಜನಪರವಾದ ಹೋರಾಟದಂತೆಯೇ ಸಾಹಿತ್ಯದಲ್ಲಿಯೂ ಆ ಜನಪರ ಕಾಳಜಿ ಇದ್ದು ಸಾಮಾಜಿಕ ಘಟನೆಗಳು, ಸರ್ಕಾರದ ಕಾನೂನುಗಳು ಇತರ ಸಾಹಿತ್ಯದ ಪ್ರಭಾವ ಹಾಗು ಸಾಹಿತ್ತಿಕ ಚರ್ಚೆಗಳು ಈ ಕಾದಂಬರಿಯ ಮೇಲೆ ಪ್ರಭಾವ ಬೀರಿದೆ ಎನ್ನಬಹುದು. ಅನಂತಮೂರ್ತಿಯವರು ಭಾವನಾತ್ಮಕವಾಗಿ ಹಾಗು ಬುದ್ಧಿ ಪೂರ್ವಕವಾಗಿ ಇಲ್ಲಿ ಸ್ಪಂದಿಸಿದ್ದಾರೆ. ಸಾಮಾಜಿಕ ಕಾಳಜಿಯನ್ನು ಪ್ರತಿನಿಧಿಸುವಲ್ಲಿ 'ಅವಸ್ಥೆ'ಯ ಮೂಲಕ ಯು. ಆರ್. ಅನಂತಮೂರ್ತಿಯವರು ಒಂದು ಹೆಜ್ಜೆಯನ್ನು ಇಟ್ಟಿದ್ದಾರೆನ್ನಬಹುದು. ಸಮಾಜ ಒಪ್ಪಿಕೊಂಡ ವಿಷಯಗಳಾದ ಗಾಂಧಿವಾದ ಲೋಹಿಯಾ ಚಿಂತನೆ ಹಾಗು ಪ್ರಜಾಪ್ರಭುತ್ವ ಈ ಅಂಶಗಳನ್ನು ಗೌರವಿಸುವ ಜೊತೆಗೆ ಅವುಗಳನ್ನು ಬಂಡಾಯದ ಅಂಶವಾಗಿ ಕಾದಂಬರಿಯಲ್ಲಿ ಕಾಣಿಸಿದ್ದಾರೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಇಂತಹ ಹಲವು ವಾದಗಳು ಸೇರಿಹೋಗಿದ್ದು ಅವುಗಳು ಜೀವಂತವಾಗಿ ಉಳಿದು ಕಾಲಕಾಲಕ್ಕೆ ತನ್ನನ್ನು ಅಭಿವ್ಯಕ್ತಿಗೊಳಿಸಿಕೊಳ್ಳುತ್ತಿದೆ.

ಯು. ಆರ್. ಅನಂತಮೂರ್ತಿಯವರು ಹೆಚ್ಚು ಹೆಚ್ಚು ವಿಚಾರವಾದಿಯಾದಂತೆ ರಾಜಕೀಯ ಅಂಶಗಳು, ರೈತ ಚಳವಳಿ, ವರ್ಗ ಹೋರಾಟ ಮುಂತಾದವುಗಳನ್ನು ಕಾದಂಬರಿಯಲ್ಲಿ ಹೆಚ್ಚು ಹೆಚ್ಚು ಕಾಣಸಿಗುತ್ತದೆ.

ಅನಂತಮೂರ್ತಿಯವರ ಕಾದಂಬರಿಗಳ ಸಾಮಾಜಿಕತೆ ಬಂಡಾಯದ ಸ್ವರೂಪವನ್ನು ಹಂತಹಂತವಾಗಿ ಪಡೆದುಕೊಳ್ಳುವುದನ್ನು ಕಾಣಬಹುದು. ಅವಸ್ಥೆಯಲ್ಲಿ ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಗಿಂತ ನಾಯಕ ಪಾತ್ರವಾದ ಕೃಷ್ಣಪ್ಪನ ಸಾಮಾಜಿಕ ಕಳಕಳಿಯು ಬಂಡಾಯದ ಸ್ವರೂಪವನ್ನು ಪಡೆದಿದೆ. ಆ ಮೂಲಕ ಕೃಷ್ಣಪ್ಪನ ವ್ಯಕ್ತಿತ್ವವೂ ಪುನರ್ ನಿರ್ಮಾಣವಾಗುವುದನ್ನು ಇಲ್ಲಿ ಕಾಣಬಹುದು. ಕಾದಂಬರಿಯ ತುಂಬೆಲ್ಲಾ ಬಂಡಾಯದ ವೈಚಾರಿಕ ಅಂಶಗಳು ಇದ್ದು ಅದೇ ಕಾದಂಬರಿಯ ಜೀವವಾಗಿದೆ. ಕೃಷ್ಣಪ್ಪ ತಾನೇನಾಗಬೇಕು ಎನ್ನುವ ಪ್ರಶ್ನೆಯನ್ನು ಒಡ್ಡಿಕೊಳ್ಳುವ ಜೊತೆಗೆ ತನ್ನ ನಿಶ್ಚಯದಿಂದ ಸಮಾಜದ ಸ್ಥಿತಿ ಏನಾಗಬಹುದೆಂದು ಯೋಚಿಸುತ್ತಾನೆ. ನಿರಂತರವಾಗಿ ಪರಿವರ್ತನೆ ಹೊಂದುವುದು ಅವನ ಮನೋಧರ್ಮವಾಗಿದೆ. ತಾನು ಹಿತ ಕಾಪಾಡಬೇಕೆಂದು ಹೊರಟಿರುವ ಸಮಾಜದ ಸ್ಥಿತಿಗತಿಗಳ ಬಗ್ಗೆ ಅವಸ್ಥೆಯ ಕೃಷ್ಣಪ್ಪನಿಗೆ ತಿಳುವಳಿಕೆ ಇದೆ. ಆದರೆ ಭಾರತೀಪುರದ ಜಗನ್ನಾಥನಿಗೆ ಇದರ ಪರಿವೆ ಇಲ್ಲ.

ಬಂಡವಾಳಶಾಹಿಯಾದ ಕೆಲ ಪಾತ್ರಗಳು ಅವಸ್ಥೆಯಲ್ಲಿದ್ದು ಅವುಗಳ ಬಗ್ಗೆ ಮೃದುಧೋರಣೆ ಇರುವುದನ್ನು ಕಾಣಬಹುದು. ನವ್ಯ ಸಾಹಿತಿಯಾದ ಅನಂತಮೂರ್ತಿಯವರ 'ಅವಸ್ಥೆ' ಕಾದಂಬರಿಯು ಪಾಶ್ಚಾತ್ಯರಾದ ಕಾಮು, ಕಾಫ್ಕ, ಸಾರ್ತ್ರೆ ಮುಂತಾದವರ ವಾದಗಳನ್ನು ಪ್ರತಿಬಿಂಬಿಸುವುದಕ್ಕಿಂತ ಕರ್ನಾಟಕದ ಸಾಂಸ್ಕೃತಿಕ ಸಂದರ್ಭವನ್ನು ಹೆಚ್ಚು ಬಿಂಬಿಸುತ್ತದೆ.  ವಸ್ತು, ತಂತ್ರಗಳ ವಿಷಯದಲ್ಲಿ ಪಾಶ್ಚಾತ್ಯರನ್ನು

ಅನುಕರಿಸಿದರೂ, ಇಲ್ಲಿಯ ಬಂಡಾಯದ ಅಂಶ ೭೦-೮೦ರ ದಶಕದ ಕರ್ನಾಟಕದ ರಾಜಕೀಯ, ಸಾಮಾಜಿಕ ಸನ್ನಿವೇಶವೇ ಆಗಿದೆ. ಎಲ್ಲವನ್ನು ಎದುರಿಸುವ ಮಾನಸಿಕ ಸಿದ್ಧತೆಯನ್ನು ಕೃಷ್ಣಪ್ಪನಲ್ಲಿ ಕಾಣಬಹುದು. ಅಸ್ತಿತ್ವವಾದದ ಪ್ರತೀಕವಾಗಿಯೂ ಕೃಷ್ಣಪ್ಪ ಕಂಡು ಬರುತ್ತಾನೆ. ಹುಡುಕಾಟ ಅವನ ನಿರಂತರ ಕ್ರಿಯೆಯಾಗಿದೆ.

ಅನಂತಮೂರ್ತಿಯವರ ನಾಲ್ಕನೆಯ ಕಾದಂಬರಿಯಾದ 'ಭವ'ದ ವೈಚಾರಿಕ ಹಿನ್ನೆಲೆಯು ವಿಭಿನ್ನವಾಗಿದೆ. ಪಾರಲೌಕಿಕ ಸುಖಕ್ಕಾಗಿ ಹಂಬಲಿಸುವ ಇಲ್ಲಿನ ಪಾತ್ರಗಳು ತಾನು ಯಾರು? ಎಂಬ ಹುಡುಕಾಟದಲ್ಲಿ ತೊಡಗುತ್ತದೆ. ಮೂರು ತಲೆಮಾರುಗಳ ಕತೆ ಇರುವುದು ಈ ಕಾದಂಬರಿಯ ವಿಶೇಷ. ಇಲ್ಲಿನ ಅನೇಕ ಪಾತ್ರಗಳು ಸಂಸಾರದಿಂದ ಮುಕ್ತರಾಗುವ ಸಲುವಾಗಿ ಪ್ರಯತ್ನಶೀಲರಾಗಿರುತ್ತಾರೆ.

ಸಾಮಾಜಿಕ ಕತೆಯೊಂದಕ್ಕೆ ಅಲೌಕಿಕ ಸತ್ಯಗಳನ್ನು ಬೆಸೆದು ಕಾದಂಬರಿಯನ್ನು ಸೃಷ್ಟಿಸಲಾಗಿದೆ. ಓದುಗನ ಅಂತರಂಗವನ್ನು ವಿಶ್ಲೇಷಣೆ ಮಾಡುತ್ತದೆ. ಧಾರ್ಮಿಕ ಕಟ್ಟುಪಾಡುಗಳು ಮತ್ತು ಮಾನವೀಯತೆ ಇಲ್ಲಿ ಮುಖಾಮುಖಿಯಾಗುತ್ತದೆ. ಧರ್ಮ ಜಿಜ್ಞಾಸೆ, ಮಾನವೀಯತೆಯ ಪ್ರತಿಪಾದನೆ, ಸಂಬಂಧಗಳ ಸೆಳೆತ, ಪ್ರೀತಿ, ಇವೆಲ್ಲ ಇಲ್ಲಿಯ ಮುಖ್ಯಾಂಶಗಳು. ಹಲವು ಅನೈತಿಕ ಸಂಬಂಧಗಳು ಇರುವ ಈ ಕಾದಂಬರಿಯಲ್ಲಿ ಅದರ ಪರಿಣಾಮವನ್ನು ಅವರ ಮಕ್ಕಳು ಎದುರಿಸಬೇಕಾದ ಅನಿವಾರ್ಯತೆಯನ್ನು ಕಾದಂಬರಿ ಸೂಚಿಸುತ್ತದೆ. ಹಿಂದೂಧರ್ಮ, ತತ್ವಶಾಸ್ತ್ರ, ಮನೋವಿಜ್ಞಾನಗಳ ಮೂಲಕ ವಿಚಾರ ಮಾಡಲಾಗಿದೆ. ಶಾಸ್ತ್ರಿ, ದಿನಕರ, ತಂತ್ರಿ, ಪ್ರಸಾದ ಮುಂತಾದ ಪಾತ್ರಗಳು ತಾನು ಯಾರು?ಏನು? ಎಂಬ ಸಂಬಂಧದ ಹುಡುಕಾಟದಲ್ಲಿ ತೊಡಗುತ್ತದೆ. ತ್ರಿಪಾಠಿಗಳು, ಸೀತಮ್ಮ, ಗಂಗೂಬಾಯಿ, ರಾಧ ಮುಂತಾದ ಪಾತ್ರಗಳು ಈ ಪ್ರಪಂಚವನ್ನು ಇರುವಂತೆಯೇ ಸ್ವೀಕರಿಸಬೇಕೆಂದು ಹಾಗೆಯೇ ಬದುಕಲು ಪ್ರಯತ್ನಿಸುತ್ತಾರೆ. ವೈಯಕ್ತಿಕ ನೆಲೆಯಲ್ಲಿ ತನ್ನ ಶೋಧವನ್ನು ನಡೆಸಿದೆ. ಡಾ. ಸಿ. ಎನ್. ರಾಮಚಂದ್ರನ್‌ರವರು ಹೇಳಿರುವಂತೆ "ಉಪನಿಷತ್ತಿನಲ್ಲಿ ಬರುವ ಸತ್ಯಕಾಮ-ಜಾಬಾಲಿಯರ ಕಥೆಯ ಎಳೆ ಹಾಗೂ ಮಹಾಭಾರತದಲ್ಲಿ ಬರುವ ಪಿತೃತ್ವದ ಪ್ರಶ್ನೆ ಇವುಗಳ ಎಳೆಯನ್ನು ಆಯ್ದುಕೊಂಡು ರೂಪುಗೊಂಡ ಕೃತಿ ಇದು. 'ಭವ' ಎಂದರೆ ಇರುವಿಕೆ ಮತ್ತು ಆಗುವಿಕೆ." ಹೀಗೆ ಉಪನಿಷತ್ತು, ತತ್ವಶಾಸ್ತ್ರ, ಆಧ್ಯಾತ್ಮದ ನೆಲೆಯಲ್ಲಿಯೂ ಮಾನವೀಯ ಮೌಲ್ಯಗಳ ನೆಲೆಯಲ್ಲಿಯೂ ಈ ಕಾದಂಬರಿ ವಿಚಾರ ಮಾಡುತ್ತದೆ. ನಂಬಿಕೆಗಳೇ ಮುಖ್ಯ ಪ್ರಭಾವವನ್ನು ಇಲ್ಲಿ ಬೀರಿದೆ ಎನ್ನಬಹುದು. ತನ್ನ ತಂದೆ ಯಾರು? ನಾನು ಯಾರ ಮಗ?ನನ್ನ ಮಗ ಯಾರು? ಎಂಬ ಪ್ರಶ್ನೆಗಳಿಗೆ ಬೇಕಾದ ಒಂದು ಉತ್ತರವನ್ನು ಹುಡುಕಲು ಪ್ರಯತ್ನಿಸುತ್ತವೆ. ಇಲ್ಲಿಯ ಬಂಡಾಯ ವೈಯಕ್ತಿಕ ನೆಲೆಯಲ್ಲಿಯೇ ವರ್ತಿಸುತ್ತದೆಯೇ ಹೊರತು ಸಾಮಾಜಿಕ ಪರಿವರ್ತನೆಗೆ ಪ್ರಯತ್ನಿಸುವುದಿಲ್ಲ. ವ್ಯಕ್ತಿಗಳಲ್ಲಿ ಆದ ಬದಲಾವಣೆ ಕಾಲಾಂತರದಲ್ಲಿ ಸಮಾಜದ ಮೇಲೆ ಪರಿಣಾಮ ಬೀರಬಹುದಷ್ಟೆ.

ಭವದ ನಂತರದ ಕಾದಂಬರಿ 'ದಿವ್ಯ.' ದಿವ್ಯದ ವೈಚಾರಿಕ ನೆಲೆ ಸಮಾಜವಾದವೇ ಆಗಿದೆ. ಪಾತ್ರಗಳು ತಿಳಿದೋ, ತಿಳಿಯದೆಯೋ, ಬಂಡಾಯವೋ ಮಾನವೀಯತೆಯೋ ಒಟ್ಟಿನಲ್ಲಿ ಭಾರತೀಯ ಸಮಾಜವಾದಿ

ನೆಲೆಯಲ್ಲಿ, ಗಾಂಧಿ ವಿಚಾರಗಳ ನೆಲೆಯಲ್ಲಿ, ಪ್ರಜಾಪ್ರಭುತ್ವದ ನೆಲೆಯಲ್ಲಿ ಮಾತನಾಡುತ್ತವೆ.

ದಿವ್ಯದ ನಾಯಕಿ ಆಧುನಿಕ ವಿದ್ಯಾಭ್ಯಾಸ ಪಡೆಯದ, ಇತರ ಭಾಷೆಗಳ ಪರಿಚಯವಿಲ್ಲದ ಆದರೆ ಮಾನವೀಯತೆಯನ್ನು ಒಳಗೊಂಡ ಆ ಕಾರಣಕ್ಕೇ 'ದೇವಿ' ಎನಿಸಿಕೊಂಡ ಹುಡುಗಿ. ಹೀಗಿದ್ದೂ ಕಾದಂಬರಿಯ ಇತರ ಪಾಶ್ಚಾತ್ಯ ವೈಚಾರಿಕ ಮನೋಭಾವವನ್ನೂ, ಆಧುನಿಕತೆಯನ್ನೂ ಹೊಂದಿದ ಪಾತ್ರಗಳಿಗಿಂತ ಭಿನ್ನವಾಗಿದ್ದಾಳೆ. ತನ್ನ ಪುಟ್ಟ ಪ್ರಪಂಚವನ್ನು ಮೀರುವ ಶಕ್ತಿ ಅವಳಿಗೆ ಬಂದಿರುವುದು ಬಹುಶಃ ಅವಳ ಸ್ವಕೀಯತೆಯಿಂದಾಗಿಯೇ ಎನ್ನಬಹುದು.

ಅವಳ ಸ್ವಕೀಯ ಪ್ರಜ್ಞೆಯ ಎದುರು ಉಳಿದ ಪಾತ್ರಗಳು ಮೌನವಾಗುತ್ತವೆ. ವಿನೋದಿನಿ, ಘನಶ್ಯಾಮ ತೀವ್ರವಾದ ಸಾಮಾಜಿಕ ಪ್ರಜ್ಞೆಯಿಂದ ವರ್ತಿಸುತ್ತಾರೆ. ತಮ್ಮ ಬಿಡುಗಡೆಗೆ ಸಮಾನತೆಯನ್ನು ಅಸ್ತ್ರವಾಗಿ ಬಳಸಿಕೊಳ್ಳುತ್ತಾರೆ.

ಹೀಗೆ ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಇರುವ ಬಂಡಾಯದ ವೈಚಾರಿಕ ಹಿನ್ನೆಲೆಯನ್ನು ಅದರ ಪ್ರಭಾವವನ್ನು, ಪ್ರತಿಕ್ರಿಯೆಯನ್ನು ಗ್ರಹಿಸಬಹುದಾಗಿದೆ.

## ಅಡಿ ಟಿಪ್ಪಣಿ

1 ಕು. ಕ. ಅ. ಸಂಸ್ಥೆಯ ಕನ್ನಡ ವಿಷಯ ವಿಶ್ವಕೋಶ ಕರ್ನಾಟಕ ಭಾಗ ೨ (ಅಚ್ಚಿನಲ್ಲಿದೆ) ಲೇಖನ ಜಿ. ಆರ್. ತಿಪ್ಪೇಸ್ವಾಮಿ. (ಈ ಪ್ರತಿಯನ್ನು ನೀಡಿ ಸಹಕರಿಸಿದವರು ಹಾ. ತಿ. ಕೃಷ್ಣೇಗೌಡರು, ಸಂಯೋಜಕ ಸಂಪಾದಕರು, ಕು. ಕ. ಅ.ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು. ಆರ್. ರಾಮಕೃಷ್ಣ, ರೀಡರ್, ಕು.ಕ.ಅ.ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು.)

2 ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧೨೬, ಲೇ. ರಂ.ಶ್ರೀ. ಮುಗಳಿ.

3 ಸಾಹಿತ್ಯ ಮತ್ತು ರಾಜಕಾರಣ, ಪುಟ ೧೬, ಲೇ. ಬರಗೂರು ರಾಮಚಂದ್ರಪ್ಪ.

4 ಅಜ್ಞಾತ ಶರಣರ ವಚನಗಳು, ಪುಟ ೪೭೯, ಸಂ. ಬಿ.ಆರ್. ಹಿರೇಮಠ.

5 ಶಿವಶರಣೆಯರ ವಚನ ಸಂಪುಟ, ಸಂ. ಡಾ. ವೀರಣ್ಣ ರಾಜೂರ.

6 ವಚನ ಸಾಹಿತ್ಯ ಸಂಗ್ರಹ, ಪುಟ ೨೬೧, ೬೧ನೇ ವಚನ.

7 ಕನ್ನಡ ಸಾಹಿತ್ಯ ಚರಿತ್ರೆ, ಪುಟ ೨೧೮, ಲೇ. ಎಚ್. ನಂಜೇಗೌಡ.

8 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೪೮, ಸಂ. ಸಿ. ವೀರಣ್ಣ.

9 ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಪುಟ ೧೩, ಲೇ. ಕೀರ್ತಿನಾಥ ಕುರ್ತಕೋಟಿ.

10 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೫೪, ಸಂ. ಸಿ. ವೀರಣ್ಣ.

11 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೫೨, ಸಂ. ಸಿ. ವೀರಣ್ಣ.

12 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೫೬, ಸಂ. ಸಿ. ವೀರಣ್ಣ.

13 ಸರ್ವಜ್ಞನ ವಚನಗಳು, ವಚನ ೧೫, ೧೬, ೫೩೧. ಸಂ. ಡಾ. ಎಲ್. ಬಸವರಾಜು.

14 ಹೊನ್ನಶೂಲ, ಲೇ. ಎಸ್. ವಿ. ರಂಗಣ್ಣ.

15 ಶಕ್ತಿ ಶಾರದೆಯ ಮೇಳ, ಪುಟ ೩೦೦, ಲೇ. ಡಿ. ಆರ್. ನಾಗರಾಜ್.

16 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೧೧೭, ಸಂ. ಸಿ. ವೀರಣ್ಣ.

17 ಶತಮಾನದ ಸಾಹಿತ್ಯ ವಿಮರ್ಶೆ, ಪುಟ ೪೭೦, ಸಂ. ಎಚ್.ಎಸ್. ರಾಘವೇಂದ್ರ ರಾವ್.

18 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೧೫೭, ಸಂ. ಸಿ. ವೀರಣ್ಣ.

19 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೧೧೧, ಸಂ. ಸಿ. ವೀರಣ್ಣ.

20 ಕನ್ನಡ ಪ್ರತಿಭಟನೆ ಕಾವ್ಯ, ಪುಟ ೨೮೭, ಸಂ. ಸಿ. ವೀರಣ್ಣ.

21 ದೀಪ ಸಾಲಿನ ನಡುವೆ, ಪುಟ ೧೫, ಲೇ. ಕೆ.ಎಸ್.ನರಸಿಂಹಸ್ವಾಮಿ.

22 ಸಂಗ್ರಹ ಜನಮನ ಸಂಸ್ಥೆ, ಮೈಸೂರು.

23 ಯುಗಪಲ್ಲಟ, ಪುಟ ೧೯, ಯು. ಆರ್. ಅನಂತಮೂರ್ತಿ.

## ಅಧ್ಯಾಯ - ೨

## ಅಧ್ಯಯನದ ವಿಧಾನ

ಯಾವುದೇ ಅಧ್ಯಯನಕ್ಕೆ ತೊಡಗುವ ಮುನ್ನ ಅಧ್ಯಯನಕ್ಕಾಗಿ ತೆಗೆದುಕೊಂಡ ವಿಷಯದಷ್ಟೇ, ಅಧ್ಯಯನಕ್ಕೆ ತೊಡಗುವ ವಿಧಾನ ಯಾವುದು? ಎಂಬ ಪ್ರಶ್ನೆ ಬಹು ಮುಖ್ಯವಾಗುತ್ತದೆ. ಅಧ್ಯಯನದ ಮಾಧ್ಯಮದಲ್ಲೇ ನಿಬಂಧದ ಮಹತ್ವ ಅಡಗಿದೆ ಎಂದರೆ ತಪ್ಪಾಗಲಾರದು. ಹಾಗಾಗಿ ಅಧ್ಯಯನದ ವಿಧಾನ ಪ್ರಮುಖ ಪಾತ್ರ ವಹಿಸುತ್ತದೆ.

ಮೂಲದಲ್ಲಿ ಸಂಶೋಧನೆ ಎಂಬುದು ಒಂದು ಬೌದ್ಧಿಕ ಕ್ರಿಯೆ. ಸಾಮಾನ್ಯ ಪ್ರವೃತ್ತಿ ಹಾಗೂ ಮಾನವನ ಅಸಾಮಾನ್ಯ ಲಕ್ಷಣ. ಹುಡುಕು, ಶುದ್ಧಗೊಳಿಸು ಎಂಬ ಅರ್ಥದಲ್ಲಿ ಇದನ್ನು ಮೊದಲಿನಿಂದಲೂ ನಾವು ಬಳಸುತ್ತಿದ್ದೆವು. ಮುಂದುವರಿದಂತೆ ಅದು ಆಂಗ್ಲರಿಂದ ಬಂದ ಒಂದು ಶೈಕ್ಷಣಿಕ ಶಿಸ್ತನ್ನು ಪ್ರತಿನಿಧಿಸುವ ಪಾರಿಭಾಷಿಕ ಪದವಾಯಿತು. ಆಂಗ್ಲ ಭಾಷೆಯಲ್ಲಿ ವಿಭಿನ್ನ ಅರ್ಥ ಹೊಂದಿದ ಇನ್‌ವೆನ್‌ಶನ್, ಡಿಸ್ಕವರಿ, ರೀಸರ್ಚ್ ಎಂಬ ಪದಗಳಿಗೆ ಕನ್ನಡದಲ್ಲಿ ಸಂಶೋಧನೆ ಎಂಬ ಒಂದೇ ಪದ ಬಳಸುತ್ತಿದ್ದು, ಸಂಶೋಧನೆಯ ಪರಿಕಲ್ಪನೆಯನ್ನು ಗೋಜಲುಗೊಳಿಸಿತ್ತು. ಅದರ ನಿವಾರಣೆಗಾಗಿ "ಡಿಸ್ಕವರಿಗೆ ಸಮಾನಾರ್ಥವಾಗಿ 'ಅನ್ವೇಷಣೆ' ಎಂದೂ ಇನ್‌ವೆನ್‌ಷನ್‌ಗೆ ಬದಲಾಗಿ 'ಆವಿಷ್ಕರಣ'ವೆಂದು ಬಳಸುವ ರೂಢಿ ಬಂದಿತು. ಈ ಡಿಸ್ಕವರಿ ಮತ್ತು ಇನ್‌ವೆನ್‌ಷನ್‌ಗಳ ಹಿಂದೆ 'ರೀಸರ್ಚ್' ಇರುತ್ತದೆ. ಇದು ಸಂಶೋಧನೆಯ ಪ್ರಕಾರವಲ್ಲ. ಬದಲಾಗಿ ಅವುಗಳ ಹಿಂದೆ ನಡೆಯುವ ಒಂದು ಪ್ರಕ್ರಿಯೆ" ಎಂದು ಎಂ. ಎಂ. ಕಲಬುರ್ಗಿಯವರು ತಮ್ಮ 'ಕನ್ನಡ ಸಂಶೋಧನ ಶಾಸ್ತ್ರ" ಎಂಬ ಗ್ರಂಥದಲ್ಲಿ ವಿವರಿಸುತ್ತಾರೆ.

ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ರೀಸರ್ಚ್ ಅಥವಾ ಸಂಶೋಧನೆಯೆಂದರೆ ಹುಡುಕು ಅಥವಾ ಅಧ್ಯಯನ ಮಾಡು ಎಂಬ ಅರ್ಥವನ್ನು ಪಡೆಯಬಹುದು. ಸಾಹಿತ್ಯಾಧ್ಯಯನವೆಂದರೆ ಈಗಾಗಲೇ ದೊರೆತಿರುವ ಅಥವಾ ರಚನೆಯಾಗಿರುವ ಸಾಹಿತ್ಯವನ್ನು ಬೇರೆ ಬೇರೆ ದೃಷ್ಟಿಕೋನದಿಂದ ವಿಮರ್ಶಿಸುವುದು. ಹಾಗಾಗಿ ಸಾಹಿತ್ಯಾಧ್ಯಯನವು ವಿಮರ್ಶೆಯ ಹಾದಿಯಲ್ಲಿದೆ. ಇಂದಿನ ಅಧ್ಯಯನವು ವಿಮರ್ಶೆಯ ಮೇಲೆ ಹೆಚ್ಚು ಅವಲಂಬಿತವಾಗಿದ್ದು ಸಂಶೋಧನೆಯು ವಿಮರ್ಶೆಯ ಒರೆಗಲ್ಲಿಗೆ ತಾಕದೆ ಹುಟ್ಟಲಾರದು. ಹಾಗು ಸಂಶೋಧನೆಯ ಉದ್ದೇಶ ಮೂಲಜ್ಞಾನವನ್ನು ವರ್ಧನೆ ಮಾಡುವುದೇ ಆಗಿದೆ.

ಸಾಹಿತ್ಯ ಕೃತಿಯೊಂದನ್ನು ಮನೋವೈಜ್ಞಾನಿಕ ಹಿನ್ನೆಲೆ, ಸಾಮಾಜಿಕ ಹಿನ್ನೆಲೆ, ಭಾಷಿಕ ಹಿನ್ನೆಲೆ, ಪುರಾಣದ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ ಹೀಗೆ ಹತ್ತು ಹಲವು ದೃಷ್ಟಿಯಿಂದ ಅಧ್ಯಯನ ಮಾಡುವುದು ನಡೆದು ಬಂದಿದೆ.

ಸಾಹಿತ್ಯ ಕೃತಿಯೊಂದನ್ನು ಅರ್ಥ ಮಾಡಿಕೊಳ್ಳುವಾಗ ಇತರ ಜ್ಞಾನಶಾಖೆಗಳು ನೀಡುವ ತಿಳುವಳಿಕೆಗಳು ಸಾಹಿತ್ಯ ಕೃತಿಗೆ ಹೊಸ ಅರ್ಥವನ್ನು ತರುತ್ತದೆ. ಇದರಿಂದ ಅಧ್ಯಯನದ ಎಲ್ಲೆಗಳು ವಿಸ್ತಾರವಾಗುತ್ತದೆ. ಯಾವುದೇ ಕಲೆ, ಸಾಹಿತ್ಯಗಳು ಸಮಾಜದ ಪ್ರೇರಣೆಯಿಂದ ರೂಪುಗೊಂಡದ್ದು. ಅದರ ಆಗು ಹೋಗುಗಳು ಸಾಹಿತ್ಯದಲ್ಲಿ

ಕಂಡೂ ಕಾಣದಂತೆ ಸೇರಿ ಹೋಗಿರುತ್ತವೆ. ಸಾಹಿತಿಯು ಪಡೆದ ಸಾಮಾಜಿಕ ಅನುಭವ, ಅವನ ಭಾಷೆ, ಜಾತಿ, ಆರ್ಥಿಕ ಸ್ಥಿತಿಗತಿಗಳು ಅವನ ಕೃತಿಗೆ ವಿಭಿನ್ನ ವಿಶೇಷತೆಯನ್ನು ನೀಡುತ್ತದೆ. ಸಾಹಿತ್ಯ ಕೃತಿಯಲ್ಲಿ ವ್ಯಕ್ತವಾಗಿರುವ ಸಮಾಜವನ್ನು ಅಧ್ಯಯನ ಮಾಡುವುದು ಒಂದು ಬಗೆಯಾದರೆ, ಕೃತಿಯ ರಚನೆಗೆ ಕಾರಣವಾದ ಹೊರಗಿನ ಸಾಮಾಜಿಕ ಸನ್ನಿವೇಶಗಳನ್ನು ಕೃತಿಯೊಂದಿಗೆ ಅಧ್ಯಯನ ಮಾಡುವುದು ಮತ್ತೊಂದು ವಿಧಾನ.

ಈ ರೀತಿಯ ಸಮಾಜೋ ಸಾಹಿತ್ಯಿಕ ಅಧ್ಯಯನದಲ್ಲಿ ಸಾಹಿತಿಯು ಸಮಾಜದಿಂದ ಪಡೆದ ಅನುಭವ ಹಾಗು ಕೃತಿಯ ಮೂಲಕ ಸಮಾಜಕ್ಕೆ ನೀಡುವ ಸಂದೇಶವನ್ನು ಗುರುತಿಸಲಾಗುತ್ತದೆ. ಸಾಹಿತಿಯ ಸಾಮಾಜಿಕ ಬದ್ಧತೆಯನ್ನು ಇಲ್ಲಿ ಗಮನಿಸಲಾಗುತ್ತದೆ.

ಬರಗೂರು ರಾಮಚಂದ್ರಪ್ಪ, ಡಿ. ಆರ್. ನಾಗರಾಜು ಮುಂತಾದವರ ಅಧ್ಯಯನಗಳಲ್ಲಿ ಸಮಾಜೋಸಾಹಿತ್ಯಿಕ ವಿಧಾನದ ಅಧ್ಯಯನವನ್ನು ಕಾಣಬಹುದು. ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ಬಳಸಲಾದ ಅಧ್ಯಯನದ ವಿಧಾನಗಳಿಗಿಂತ ವಿಭಿನ್ನವಾದ ನೆಲೆಯಲ್ಲಿ ಇವರು ಅಧ್ಯಯನವನ್ನು ಕೈಗೊಂಡರು.

ಸಾಹಿತಿಯು ತನ್ನ ಅನುಭವಕ್ಕೆ ಬಂದ ಸಮಾಜವನ್ನು ವ್ಯಕ್ತಪಡಿಸಿರುತ್ತಾನೆ. ಲಿಖಿತ ಸಾಹಿತ್ಯದಲ್ಲಿಯೂ ಜನಪದ ಸಾಹಿತ್ಯದಲ್ಲಿಯೂ ಸಾಮಾಜಿಕ ಕುಂದು ಕೊರತೆಯ ಬಗ್ಗೆ ದನಿ ಎತ್ತಿದ್ದು, ಅದನ್ನು ಸಾಮಾಜಿಕ ಆಯಾಮದಿಂದಲೇ ಗ್ರಹಿಸುವುದು ಮುಖ್ಯವಾಗುತ್ತದೆ.

ಈ ನಿಟ್ಟಿನಲ್ಲಿ ನವ್ಯ ಸಾಹಿತಿ ಎಂದು ಗುರುತಿಸಲ್ಪಡುವ ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಈ ಕಾದಂಬರಿಗಳನ್ನು ಈ ಹಿಂದೆಯೂ ಎಂ. ಜಿ. ಕೃಷ್ಣಮೂರ್ತಿ, ಕೀರ್ತಿನಾಥ ಕುರ್ತಕೋಟಿ, ಜಿ. ಎಸ್. ಆಮೂರ, ಎಚ್. ಎಸ್. ರಾಘವೇಂದ್ರ ರಾವ್, ಸಿ.ಎನ್. ರಾಮಚಂದ್ರನ್, ಬಸವರಾಜ ಕಲ್ಗುಡಿ, ಎಸ್. ಎಸ್. ಹಿರೇಮಠ, ಎಚ್. ಶಶಿಕಲಾ, ಡಿ. ಆರ್. ನಾಗರಾಜು, ಡಾ. ವಿಜಯಾ ಸುಬ್ಬರಾಜ್ ಮೊದಲಾದ ಅಧ್ಯಯನಶೀಲರು ಮನೋವೈಜ್ಞಾನಿಕ, ತುಲನಾತ್ಮಕ ಹೀಗೆ ಅಂತರ್ ಶಿಸ್ತೀಯ ಆಯಾಮಗಳಿಂದ ಅಧ್ಯಯನ ನಡೆಸಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಅನಂತಮೂರ್ತಿಯವರ ಐದು ಕಾದಂಬರಿಗಳನ್ನು ಅವುಗಳ ಕಥಾವಸ್ತುವಿನಲ್ಲಿ ವ್ಯಕ್ತವಾಗಿರುವ ಸಮಾಜವನ್ನು ಆ ಕಾಲಘಟ್ಟದ ಪ್ರಮುಖ ಸಾಮಾಜಿಕ ಚಿಂತನೆಗಳ ನೆರವಿನಿಂದ ಅಧ್ಯಯನ ಕೈಗೊಳ್ಳಲಾಗಿದೆ.

೧೯-೨೦ನೇ ಶತಮಾನದ ಪ್ರಮುಖ ಸಾಮಾಜಿಕ ಚಿಂತನೆಗಳಾದ ಗಾಂಧೀವಾದ, ಸಮಾಜವಾದ ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯು ಕಾದಂಬರಿಯಲ್ಲಿ ಹೇಗೆ ಬಂಡಾಯದ ಅಂಶಗಳಾಗಿ ಹೊಮ್ಮಿದೆ ಎನ್ನುವುದನ್ನು ಗುರುತಿಸುವುದು ಈ ಅಧ್ಯಯನದ ವಿಧಾನವಾಗಿದೆ.

## ಅಧ್ಯಾಯ - ೩

## ಯು. ಆರ್. ಅನಂತಮೂರ್ತಿಯವರ ಜೀವನ - ಸಾಧನೆ

**೧. ಜನನ :**

ಉಡುಪಿ ರಾಜಗೋಪಾಲಾಚಾರ್ಯ ಅನಂತಮೂರ್ತಿಯವರು ೨೧-೧೨-೧೯೩೨ರಲ್ಲಿ ಶಿವಮೊಗ್ಗ ಜಿಲ್ಲೆಯ ಮೇಳಿಗೆಯಲ್ಲಿ ಜನಿಸಿದರು. ರಾಜಗೋಪಾಲಾಚಾರ್ಯ -ಸತ್ಯಮ್ಮ ದಂಪತಿಗಳ ನಾಲ್ಕು ಜನ ಮಕ್ಕಳಲ್ಲಿ ಇವರೇ ಮೊದಲಿಗರು.

**೨. ವಿದ್ಯಾಭ್ಯಾಸ :**

ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮೇಳಿಗೆ, ಕೋಣಂದೂರು, ಬೇವಗಳ್ಳಿ ಹಾಗು ತೀರ್ಥಹಳ್ಳಿಯಲ್ಲಿ ನಡೆಸಿದರು. ಹಾಗು ಹೈಸ್ಕೂಲ್ ವಿದ್ಯಾಭ್ಯಾಸವನ್ನು ಶಿವಮೊಗ್ಗದಲ್ಲಿಯೇ ಪಡೆದರು. ತೀರ್ಥಹಳ್ಳಿಯ ಶಾಲೆಗೆ ದೂರ್ವಾಸಪುರದಿಂದ ದಿನವೂ ಓಡಾಡಬೇಕಾಗಿತ್ತು. ತಂದೆಯಿಂದ 'ಲೀಲಾವತಿ ಗಣಿತ'ವನ್ನು ಮನೆಯಲ್ಲಿಯೇ ಕಲಿತರು. ದೂರ್ವಾಸಪುರದಲ್ಲಿ ಮುಳಬಾಗಿಲು ಮಠದವರು ನಡೆಸುತ್ತಿದ್ದ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಕಲಿತರು.

ತಂದೆಯಾದ ರಾಜಗೋಪಾಲಾಚಾರ್ಯರು, ಇಂಗ್ಲೀಷ್ ಗುರುಗಳಾದ ಸರ್ವೋತ್ತಮ ರಾಯರು, ಸಂಸ್ಕೃತ ಗುರುಗಳಾದ ಸದಾಶಿವಭಟ್ಟರ ಜೊತೆಗಿನ ವಾಗ್ವಾದ, ಚರ್ಚೆ, ಅಧ್ಯಾಪನಗಳಿಂದ ಬಾಲ್ಯದಲ್ಲಿಯೇ ಪ್ರಭಾವಿತರಾಗಿದ್ದರು. ಇದರ ಜೊತೆಗೆ ೧೯೩೦-೧೯೪೦ ರ ವೇಳೆಯಲ್ಲಿ ತೀರ್ಥಹಳ್ಳಿಯ ಸುತ್ತಮುತ್ತ ಗಾಂಧೀಜಿಯವರ ಪ್ರಭಾವವೂ ಆಗಿದ್ದು ಅದು ಅನಂತಮೂರ್ತಿಯವರ ಮೇಲೂ ಪ್ರಭಾವ ಬೀರಿದೆ.

ಶಿವಮೊಗ್ಗದಲ್ಲಿ ಇಂಟರ್‌ಮೀಡಿಯಟ್ ಅನ್ನೂ, ೧೯೫೪ರಲ್ಲಿ ಬಿ.ಎ. ಯನ್ನು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕಲಿತು ೧೯೫೬ರಲ್ಲಿ ಮೈಸೂರು ವಿ.ವಿ.ಯಲ್ಲಿ ಇಂಗ್ಲೀಷ್ ಎಂ.ಎ. ತರಗತಿಗೆ ಸೇರಿದರು. ನಂತರ ಕಾಮನ್‌ವೆಲ್ತ್ ಫೆಲೋಷಿಪ್ ಪಡೆದು ಇಂಗ್ಲೆಂಡಿನ ಬರ್ಮಿಂಗ್‌ಹ್ಯಾಂ ವಿಶ್ವವಿದ್ಯಾನಿಲಯದಿಂದ '೧೯೩೦ರ ದಶಕದ ರಾಜಕೀಯ ಮತ್ತು ಕಾದಂಬರಿ' ಎಂಬ ನಿಬಂಧವನ್ನು ಮಂಡಿಸಿ ಪಿ.ಹೆಚ್.ಡಿ ಪದವಿಯನ್ನು ಗಳಿಸಿದರು.

**೩. ವೃತ್ತಿ ಜೀವನ :**

ಯು. ಆರ್. ಅನಂತಮೂರ್ತಿಯವರ ವೃತ್ತಿಜೀವನ ನಾಡಿನೊಳಗೆ ಮಾತ್ರವಲ್ಲ, ವಿದೇಶದಲ್ಲೂ ಜರುಗಿದೆ. ಅವರು ನೂರಾರು ಉಪನ್ಯಾಸಗಳನ್ನು ವಿದೇಶಗಳಲ್ಲಿ ನೀಡಿದ್ದಾರೆ. ಆ ಮೂಲಕ ತಮ್ಮದೇ ಆದ ವಿಶಿಷ್ಟ ಛಾಪನ್ನು ಉಳಿಸಿಕೊಂಡಿದ್ದಾರೆ.

ಅವರ ವೃತ್ತಿಜೀವನದ ಆರಂಭದಲ್ಲಿ ಎಂದರೆ ೧೯೫೪ರಲ್ಲಿ ಅವರು ಶಿವಮೊಗ್ಗದಲ್ಲಿ ಇಂಗ್ಲೀಷ್ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದರು. ೧೯೫೭-೬೩ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ೧೯೬೭-೭೦ರಲ್ಲಿ ಮೈಸೂರಿನ ರೀಜನಲ್ ಕಾಲೇಜ್ ಆಫ್ ಎಜುಕೇಷನ್‌ನಲ್ಲಿ ರೀಡರ್ ಆಗಿ ಸೇವೆ ಸಲ್ಲಿಸಿದ್ದಾರೆ. ಹಾಗೆಯೇ ೧೯೭೦-೮೦ರಲ್ಲಿ ಮೈಸೂರು ವಿ.ವಿ.ಯ ಇಂಗ್ಲೀಷ್ ವಿಭಾಗದಲ್ಲಿ ರೀಡರ್ ಆಗಿದ್ದರು. ೧೯೮೨ರಲ್ಲಿ ಕೊಲ್ಹಾಪುರ ಶಿವಾಜಿ ವಿ.ವಿ.ಗೆ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೮೭ರಿಂದ ೯೧ರ ವರೆಗೆ ಕೇರಳದ ಕೊಟ್ಟಾಯಂನ ಮಹಾತ್ಮಾಗಾಂಧಿ ವಿಶ್ವವಿದ್ಯಾನಿಲಯದ ಕುಲಪತಿಯಾಗಿ ಸೇವೆ ಸಲ್ಲಿಸಿದ್ದಾರೆ.

ಇದಲ್ಲದೆ ನವದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟ್ ನಲ್ಲಿ ೧೯೯೨-೯೩ನೇ ಸಾಲಿನಲ್ಲಿ ಅಧ್ಯಕ್ಷರಾಗಿದ್ದರು. ೧೯೯೩-೯೮ರವರೆಗೆ ಕೇಂದ್ರಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು. ೧೯೯೮ರಲ್ಲಿ ದೆಹಲಿಯ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್‌ನ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು.

**೪. ಯು. ಆರ್. ಅನಂತಮೂರ್ತಿಯವರನ್ನು ರೂಪುಗೊಳಿಸಿದ ಸನ್ನಿವೇಶಗಳು :**

ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ತಮ್ಮ ಅಗ್ರಹಾರದ ಗೆಳೆಯರೊಡನೆ 'ತರಂಗಿಣಿ' ಎಂಬ ಕೈಬರಹದ ಪತ್ರಿಕೆಯನ್ನು ಪ್ರಾರಂಭಿಸಿ ಕನ್ನಡ ಸಂಸ್ಕೃತ, ಇಂಗ್ಲೀಷ್ ಭಾಷೆಯ ಲೇಖನಗಳನ್ನು ಪ್ರಕಟಿಸುತ್ತಿದ್ದು, ಅನಂತಮೂರ್ತಿಯವರು ಒಂದು ಕತೆಯನ್ನು ಬರೆದು ಪ್ರಕಟಿಸಿದ್ದರು. ತೀರ್ಥಹಳ್ಳಿಯಲ್ಲಿ ಇದ್ದ ದಿನಗಳಲ್ಲಿ ರಾಷ್ಟ್ರರಾಜಕಾರಣದ ಪರಿಚಯವಾಗಿ ಸಮಾಜವಾದದ ಬಗ್ಗೆಯೂ ಆಸಕ್ತಿ ಹೊಂದಿದರು. ಶಿವಮೊಗ್ಗದಲ್ಲಿ ಇಂಟರ್‌ಮೀಡಿಯೇಟ್ ಓದುತ್ತಿದ್ದಾಗ ಕೆ.ವಿ. ಸುಬ್ಬಣ್ಣ ಮುಂತಾದವರ ಪರಿಚಯವಾಯಿತು. ಇಂಟರ್‌ಮೀಡಿಯೇಟ್‌ನಲ್ಲಿ ಅನುತ್ತೀರ್ಣರಾಗಿ ತಂದೆ ಭಯದಿಂದ ಕುಂದಾಪುರಕ್ಕೆ ಹೋಗಿ ಅಲೆದಾಡಿದರು. ಆನಂತರ ಮರಳಿ ಮನೆ ಸೇರಿ ಸಪ್ಲಿಮೆಂಟರಿಯಲ್ಲಿ ಉತ್ತೀರ್ಣರಾಗಿ ಮೈಸೂರಿಲ್ಲಿ ಇಂಗ್ಲೀಷ್ ಬಿ.ಎ. (ಆನರ್ಸ್) ಕಲಿಯಲು ಪ್ರಾರಂಭಿಸಿದರು. ಈ ಮೊದಲು ಶಿವಮೊಗ್ಗದಲ್ಲಿ ಇದ್ದಾಗ ಕಾಗೋಡು ರೈತ ಸತ್ಯಾಗ್ರಹದಲ್ಲಿ ಭಾಗವಹಿಸಿ, ರೈತರ ಸಮಸ್ಯೆಯ ಬಗ್ಗೆ ಒಂದು ಚಿಕ್ಕ ಪುಸ್ತಕವನ್ನು ಬರೆದು ಪ್ರಕಟಿಸಿದ್ದರು. ಸಮಾಜವಾದಿ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯೂ ಆಗಿದ್ದರು. ಈ ಸಮಾಜವಾದಿ ಚಟುವಟಿಕೆ ಮೈಸೂರಿನಲ್ಲಿಯೂ ಮುಂದುವರಿಯಿತು. ಕೆ.ವಿ. ಸುಬ್ಬಣ್ಣನವರ ಒಡನಾಟ ಹಣಕಾಸಿಗೂ, ಸಾಹಿತ್ಯದ ಚರ್ಚೆಗೂ ಸಹಕಾರಿಯಾಗಿದ್ದವು. ಮೈಸೂರಿನ ತಮ್ಮ ಗೆಳೆಯರ ಬಳಗದೊಂದಿಗೆ ಅಡಿಗರನ್ನು ಪರಿಚಯ ಮಾಡಿಕೊಂಡರು. ಅವರ ಪ್ರಭಾವದಿಂದಲೇ ಏನೋ ಅನಂತಮೂರ್ತಿಯವರೂ ಅವರಿಗರಿವಿಲ್ಲದೆಯೆ ನವ್ಯರಾದರು. ಆ ವೇಳೆಗಾಗಲೇ ನಾಲ್ಕಾರು ಸಣ್ಣಕತೆಗಳೂ ಪ್ರಕಟವಾಗಿದ್ದವು. ಮೈಸೂರಿನ 'ಚಿತ್ರಗುಪ್ತ', 'ಜನಪ್ರಗತಿ' ಪತ್ರಿಕೆಗಳಲ್ಲಿ ಇವರ ಕತೆಗಳು ಪ್ರಕಟವಾದವು. ನಿರಂಜನರವರು ತಮ್ಮ ಪತ್ರಿಕೆಯಲ್ಲಿ 'ಕೈ ತಪ್ಪಿತು' ಎಂಬ ಇವರ ಕತೆಯನ್ನು ಪ್ರಕಟಿಸಿದರು. ಮೈಸೂರಿನ 'ವಾರ್ಸಿಟಿ ಟೈಮ್ಸ್' ಪತ್ರಿಕೆಯಲ್ಲಿ 'ಎಂದೆಂದೂ ಮುಗಿಯದ ಕತೆ' ಪ್ರಕಟವಾಯಿತು.

ಅವರ ಮತ್ತೊಂದು ಕತೆ ಇಂಗ್ಲೀಷ್‌ಗೆ ಭಾಷಾಂತರಗೊಂಡು 'QUEST'ನಲ್ಲಿ ಪ್ರಕಟವಾಗಿ ಐದುನೂರು ರೂಪಾಯಿ ಗೌರವಧನ ಪಡೆದಿದ್ದರು. 'ಎಂದೆಂದೂ ಮುಗಿಯದ ಕತೆ' ಅವರ ಮೊದಲ ಕಥಾಸಂಕಲನ. ಇದಕ್ಕೆ ಅಡಿಗರು ಮುನ್ನುಡಿಯನ್ನು ಬರೆದರು. ಇದು ೧೯೬೨ರಲ್ಲಿ ಪ್ರಕಟವಾಯಿತು. ಆನಂತರ ಕನ್ನಡ ಸಾಹಿತ್ಯದಲ್ಲಿಯೇ ಹೊಸ ಅಲೆಯನ್ನು ತಂದ 'ಸಂಸ್ಕಾರ' ಕಾದಂಬರಿಯು ೧೯೬೫ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯಿಂದ ಪ್ರಕಟಗೊಂಡಿತು. ಅಲ್ಲಿಂದ ಮುಂದೆ ಅವರ ಸಾಹಿತ್ಯ ಕೃಷಿ ನಿರಂತರವಾಗಿ ನಡೆದು ಬಂದಿದೆ.



೫. ವೈವಾಹಿಕ ಜೀವನ :

೧೯೫೬ರಲ್ಲಿ ಹಾಸನದಲ್ಲಿ ಉಪನ್ಯಾಸಕರಾಗಿದ್ದಾಗಲೇ ಅವರ ವಿದ್ಯಾರ್ಥಿನಿಯಾದ ಎಸ್ತರ್ ಅವರನ್ನು ಪ್ರೀತಿಸಿದ್ದರು. ತಂದೆ ತಾಯಿಯರ ವಿರೋಧ. ಧಾರ್ಮಿಕ ಕಟ್ಟುಪಾಡುಗಳು ಇವರನ್ನು ದೂರ ಮಾಡಲಿಲ್ಲ. ನಂತರ ೧೯೬೧ರಲ್ಲಿ ಇವರಿಬ್ಬರ ವಿವಾಹವಾಯಿತು. ಆಗ ಅನಂತಮೂರ್ತಿಯವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ಆಗ ಎಸ್ತರ್‌ರವರು ಇನ್ನೂ ಬಿ.ಎಸ್.ಸಿ. ವಿದ್ಯಾರ್ಥಿನಿ. ೧೯೬೨ರಲ್ಲಿ ಶರತ್‌ನ ಜನನದ ನಂತರ ಅನಂತಮೂರ್ತಿಯವರು ತಮ್ಮ ತಂದೆಯವರ ಜೊತೆಗೆ ಹೊಂದಿದ್ದ ವಿರೋಧ ಮುಕ್ತವಾಯಿತು. ನಂತರ ಅವರು ಇಂಗ್ಲೆಂಡ್‌ಗೆ ತೆರಳಿ ಅಲ್ಲಿ ಪಿ.ಎಚ್.ಡಿ. ಅಧ್ಯಯನದಲ್ಲಿ ತೊಡಗಿದರು. ೧೯೬೪ರಲ್ಲಿ ಎಸ್ತರ್‌ರವರು ತಮ್ಮ ವಿದ್ಯಾಭ್ಯಾಸ ಮುಂದುವರಿಸಿ ಮೈಸೂರಿನಲ್ಲಿ ಕೆಲ ಕಾಲ ಕೆಲಸ ಮಾಡಿದರು. ಈ ನಡುವೆ ೧೯೬೬ರಲ್ಲಿ ಮತ್ತೊಬ್ಬ ಮಗಳು ಅನುರಾಧ ಜನಸಿದ್ದರು. ೧೯೬೩-೬೬ ರಲ್ಲಿ ಬರ್ಮಿಂಗ್‌ಹ್ಯಾಂ ವಿಶ್ವವಿದ್ಯಾನಿಲಯದ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರು. '೧೯೩೦ರ ದಶಕದ ರಾಜಕೀಯ ಮತ್ತು ಕಾದಂಬರಿ' ಎಂಬ ವಿಷಯವಾಗಿ ಪಿ.ಎಚ್.ಡಿ . ಪಡೆದರು. ಅವರು ವಿದೇಶದಲ್ಲಿ ಇದ್ದುಕೊಂಡೇ 'ಸಂಸ್ಕಾರ'ವನ್ನು ಬರೆದದ್ದು.

ನಂತರ ಮೈಸೂರಿಗೆ ಬಂದು 'ರೀಜನಲ್ ಕಾಲೇಜ್ ಆಫ್ ಎಜುಕೇಶನ್'ನಲ್ಲಿ ಇಂಗ್ಲೀಷ್ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದರು. ೧೯೮೧ರಲ್ಲಿ 'ಋಜುವಾತು' ಎಂಬ ತ್ರೈಮಾಸಿಕವನ್ನು ಪ್ರಾರಂಭಿಸಿ ಕೆಲ ವರ್ಷಗಳ ಕಾಲ ಮುನ್ನಡೆಸಿದರು.

೧೯೮೭-೯೧ರಲ್ಲಿ ಕೇರಳದ ಕೊಟ್ಟಾಯಂನ ಮಹಾತ್ಮಾ ಗಾಂಧಿ ವಿ.ವಿ.ಯ ಕುಲಪತಿಗಳಾಗಿ ಸೇವೆ ಸಲ್ಲಿಸಿದರು. ಇವರ ಒಟ್ಟು ಜೀವಮಾನದ ಸಾಹಿತ್ಯಿಕ ಸಾಧನೆಗಾಗಿ ಭಾರತೀಯ ಸಾಹಿತ್ಯದ ಪರಮೋನ್ನತ ಪದವಿಯಾದ ಜ್ಞಾನಪೀಠವು ೧೯೯೪ರಲ್ಲಿ ದೊರಕಿತು. ಕನ್ನಡಕ್ಕೆ ಆರನೆಯ ಜ್ಞಾನಪೀಠವನ್ನು ತಂದುದಲ್ಲದೆ ನವ್ಯ ಸಾಹಿತ್ಯಕ್ಕೆ ಸಿಕ್ಕ ಗೌರವವೂ ಆದಾಗಿದೆ ಎಂದು ಹೇಳಬಹುದು.

## ೬. ಯು. ಆರ್. ಅನಂತಮೂರ್ತಿ ಮತ್ತು ರಾಜಕೀಯ ರಂಗ :

ವಿದ್ಯಾರ್ಥಿ ದಿಸೆಯಿಂದಲೂ ಸಮಾಜವಾದಿಯಾಗಿ ಅನೇಕ ಕಾರ್ಯಚಟುವಟಿಕೆಯಲ್ಲಿಯೂ, ರೈತ ಚಳವಳಿಯಲ್ಲಿಯೂ ಭಾಗಿಯಾಗಿದ್ದ ಯು. ಆರ್. ಅನಂತಮೂರ್ತಿಯವರು ತಮ್ಮ ವೃತ್ತಿಜೀವನದಿಂದ ನಿವೃತ್ತರಾದ ನಂತರ ರಾಜಕಾರಣದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಉದ್ದೇಶದಿಂದ ಕರ್ನಾಟಕದಿಂದ ಮೇಲ್ಮನೆಯಾದ ರಾಜ್ಯಸಭೆಗೆ (MP) ಸ್ವತಂತ್ರ್ಯ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಇವರ ವಿರೋಧ ಅಭ್ಯರ್ಥಿಯಾಗಿ ರಾಜೀವ್ ಚಂದ್ರಶೇಖರ್‌ರವರು ಸ್ಪರ್ಧಿಸಿದ್ದರು. ಈ ಚುನಾವಣೆಯಲ್ಲಿ ಅನಂತಮೂರ್ತಿಯವರು ಸೋಲನ್ನು ಅನುಭವಿಸಿದರು.

### ಕೃತಿಗಳು

**ಕಾದಂಬರಿಗಳು**

| | | |
|---|---|---|
| ೧ | ಸಂಸ್ಕಾರ | ೧೯೬೫ |
| ೨ | ಭಾರತೀಪುರ | ೧೯೭೩ |
| ೩ | ಅವಸ್ಥೆ | ೧೯೭೮ |
| ೪ | ಭವ | ೧೯೯೪ |
| ೫ | ದಿವ್ಯ | ೨೦೦೧ |

**ಸಣ್ಣಕಥೆಗಳು- ಸಂಕಲನ**

| | | |
|---|---|---|
| ೧ | ಪ್ರಶ್ನೆ | ೧೯೬೨ |
| ೨ | ಮೌನಿ | ೧೯೬೭ |
| ೩ | ಆಕಾಶ ಮತ್ತು ಬೆಕ್ಕು | ೧೯೮೩ |
| ೪ | ಮೂರು ದಶಕದ ಕಥೆಗಳು | ೧೯೮೯ |
| ೫ | ಸೂರ್ಯನ ಕುದುರೆ | ೧೯೯೫ |
| ೬ | ಐದು ದಶಕದ ಸಣ್ಣ ಕಥೆಗಳು | ೧೯೯೯ |

**ನಾಟಕ**

| | | |
|---|---|---|
| ೧ | ಆವಾಹನೆ | ೧೯೬೮ |

**ವಿಮರ್ಶೆ**

| | | |
|---|---|---|
| ೧ | ಪ್ರಜ್ಞೆ ಮತ್ತು ಪರಿಸರ | ೧೯೭೧ |
| ೨ | ಸಮಕ್ಷಮ | ೧೯೮೭ |

೩ ಸಂಸ್ಕೃತಿ ಮತ್ತು ಅಡಿಗ ೧೯೯೬

೪ ಬೆತ್ತಲೆ ಪೂಜೆ ಯಾಕೆ ಕೂಡದು ೧೯೯೬

ಕವನ ಸಂಕಲನ

೧ ಬಾವಲಿ ೧೯೬೩

೨ ಪದ್ಯಗಳು ೧೯೭೦

೩ ಅಜ್ಜನ ಹೆಗಲ ಸುಕ್ಕುಗಳು ೧೯೮೯

೪ ಮಿಥುನ ೧೯೯೨

ಲೇಖನಗಳು

೧ ಸನ್ನಿವೇಶ ೧೯೭೪

೨ ನವ್ಯಾಲೋಕ ೧೯೯೭ (ಮುನ್ನುಡಿಗಳ ಸಂಕಲನ)

೩ ಕನ್ನಡ ಕರ್ನಾಟಕ ೨೦೦೨

೪ ಯುಗಪಲ್ಲಟ ೨೦೦೪

೫ ಪೂರ್ವಾಪರ ೧೯೯೦

೬ ವಾಲ್ಮೀಕಿಯ ನೆವದಲ್ಲಿ ೨೦೦೬

೭ ಋಜುವಾತು ೨೦೦೭

ಭಾಷಾಂತರ

೧ ದಾವ್ ದ ಜಿಂಗ್ ೧೯೯೪

ಯು. ಆರ್. ಅನಂತಮೂರ್ತಿಯವರಿಗೆ ಸಂದ ಪ್ರಮುಖ ಪ್ರಶಸ್ತಿ ಗೌರವಗಳ ಪಟ್ಟಿ

೧ ೧೯೫೬ ಮೈ. ವಿ. ವಿ. ಯಿಂದ ಇಂಗ್ಲೀಷ್ ಎಂ. ಎ.ಯಲ್ಲಿ ಪ್ರಥಮ ಸ್ಥಾನ ಗಳಿಸಿದ್ದಕ್ಕಾಗಿ ಚಿನ್ನದ ಪದಕ ಪಡೆದರು.

೨ ೧೯೭೦ 'ಸಂಸ್ಕಾರ' ಚಲನಚಿತ್ರವಾಗಿ ತೆರೆಕಂಡು ಅದರ ಕಥೆಗೆ ಚಲನಚಿತ್ರ ರಾಜ್ಯಪ್ರಶಸ್ತಿ ಗಳಿಸಿದರು.

೩ ೧೯೮೩ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೪ ೧೯೮೪ ರಾಜ್ಯೋತ್ಸವ ಪ್ರಶಸ್ತಿ.

೫ ೧೯೮೬ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ.

೬ ೧೯೮೮ ಅದಮಾರು ಮಠದಿಂದ 'ಸಮಾಜ ಭೂಷಣ' ಪ್ರಶಸ್ತಿ.

೭ ೧೯೮೯ 'ಬರ' ಕತೆಗೆ ಚಲನಚಿತ್ರ ರಾಜ್ಯ ಪ್ರಶಸ್ತಿ.

೮ ೧೯೯೦ ಹಾರ್ಮೋನಿ ಅವಾರ್ಡ್.

೯ ೧೯೯೪ ಮಾಸ್ತಿ ಪ್ರಶಸ್ತಿ.

೧೦ ೧೯೯೪ ಜ್ಞಾನಪೀಠ ಪ್ರಶಸ್ತಿ.

೧೧ ೧೯೯೫ ಶಾಂತಿಭಾರತಿ ಡಿ.ಲಿಟ್. ಗೌರವ.

೧೨ ೧೯೯೫ ಹಿಮಾಚಲ ಪ್ರದೇಶದ ಸರ್ಕಾರದ ಶಿಖರ್ ಸನ್ಮಾನ್, ಕಲ್ಕತ್ತಾದ ರವೀಂದ್ರ ಭಾರತಿ ವಿ. ವಿ. ಯಿಂದ ಗೌರವ ಡಿ. ಲಿಟ್. ಪ್ರಶಸ್ತಿ.

೧೩ ೧೯೯೮ ಪದ್ಮವಿಭೂಷಣ ಪ್ರಶಸ್ತಿ

೧೪ ೨೦೦೨ ತುಮಕೂರಿನಲ್ಲಿ ನಡೆದ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು.

## ಉಪನ್ಯಾಸಗಳು

### ವಿದೇಶದಲ್ಲಿ ಯು. ಆರ್. ಅನಂತಮೂರ್ತಿಯವರು ನೀಡಿದ ಉಪನ್ಯಾಸಗಳು

೧೯೬೩-೬೬ ಇಂಗ್ಲೆಂಡಿನ ಬರ್ಮಿಂಗ್‌ಹ್ಯಾಂ ವಿಶ್ವವಿದ್ಯಾನಿಲಯದಲ್ಲಿ ಪಿ.ಹೆಚ್.ಡಿ ಅಧ್ಯಯನ.

೧೯೭೫ ಯು.ಎಸ್.ಎ. ಯ ಅಯೋವಾ ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಲೇಖಕ.

೧೯೭೮ ಟಫ್ಟ್ಸ್ ವಿಶ್ವವಿದ್ಯಾನಿಯದಲ್ಲಿ ಸಂದರ್ಶಕ ಪ್ರಾಧ್ಯಾಪಕ.

೧೯೮೫ ಅಯೋವಾ ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ವಿಚಾರ ಗೋಷ್ಠಿ-'ಸ್ವರಾಜಂ ಇನ್ ಐಡಿಯಾಸ್.'

೧೯೮೫ ಮಡಿಸನ್ (MADISON) ಹಾಗೂ ಚಿಕಾಗೋ ವಿಶ್ವವಿದ್ಯಾನಿಲಯಗಳಲ್ಲಿ 'ಭಾರತೀಯ ಸಾಹಿತ್ಯ' ಕುರಿತು ಮೂರು ಉಪನ್ಯಾಸಗಳು.

೧೯೮೫ ಬೋಸ್ಟನ್ ಹಾಗೂ ಮಸ್ಸಾಚುಸೆಟ್ಸ್‌ಗಳಲ್ಲಿ ಎರಡು ಉಪನ್ಯಾಸಗಳು - 'ಇಂಡಿಯನ್ ರೈಟರ್ಸ್ ಸರ್ಚ್ ಫಾರ್ ಐಡೆಂಟಿಟಿ' ಹಾಗೂ 'ಪೊಲಿಟಿಕ್ಸ್ ಇನ್ ಕರ್ನಾಟಕ'

೧೯೮೬-೮೭ ಅಯೋವಾ ವಿಶ್ವವಿದ್ಯಾನಿಲಯದ ಏಷಿಯನ್ ಭಾಷೆಗಳ ವಿಭಾಗದಲ್ಲಿ ಫುಲ್‌ಬ್ರೈಟ್ ಪ್ರೊಫೆಸರ್.

೧೯೮೬ ಚಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಕಾದಂಬರಿ ವಾಚನ.

೧೯೮೭ ಚಿಕಾಗೋ ವಿಶ್ವವಿದ್ಯಾನಿಲಯದ ದಕ್ಷಿಣ ಏಷಿಯನ್ ಭಾಷೆಗಳು ಮತ್ತು ಸಾಹಿತ್ಯ ವಿಭಾಗದಲ್ಲಿ ಉಪನ್ಯಾಸ-'ಕಾನ್‌ಸೆಪ್ಟ್ ಆಫ್ ಸಿನ್ಸಿಯಾರಿಟಿ ಆಂಡ್ ಅಥೆಂಟಿಸಿಟಿ - ಎನ್ ಓವರ್‌ವ್ಯೂ ಆಫ್ ಕನ್ನಡ ಲಿಟರೇಚರ್.'

೧೯೮೭ ನ್ಯೂಯಾರ್ಕ್ ಕನ್ನಡ ಕೂಟದಲ್ಲಿ ಉಪನ್ಯಾಸ 'ಕರ್ನಾಟಕದ ಸಮಕಾಲೀನ ಸಾಂಸ್ಕೃತಿಕ ಸನ್ನಿವೇಶ.'

೧೯೮೭ ಫಿಲಡೆಲ್ಫಿಯಾ ಕನ್ನಡ ಕೂಟದಲ್ಲಿ ಉಪನ್ಯಾಸ 'ಕನ್ನಡ ಸಾಹಿತ್ಯ.'

೧೯೮೭ ಬರ್ಕಲಿಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸ 'ಕಲೋನಿಯಲಿಸಮ್ ಆಂಡ್ ಇಂಡಿಯನ್ ಲಿಟರೇಚರ್.'

೧೯೯೩ ಚಿಕಾಗೋದ ವರ್ಲ್ಡ್ ಪಾರ್ಲಿಮೆಂಟ್ ಆಫ್ ರಿಲಿಜನ್ಸ್‌ನಲ್ಲಿ ಭಾರತ ಸರಕಾರದ ಪ್ರತಿನಿಧಿ.

೧೯೯೮ ಸಿರಿಯಾದಲ್ಲಿ ಅರಬ್ ಲೇಖಕರೊಂದಿಗೆ ಸಂವಾದ.

**ಭಾರತದ ವಿವಿಧ ನಗರಗಳಲ್ಲಿ ಡಾ. ಯು. ಆರ್. ಅನಂತಮೂರ್ತಿಯವರು ನೀಡಿದ ವಿಶೇಷ ಉಪನ್ಯಾಸಗಳನ್ನು ಕಾಲಾನುಕ್ರಮವಾಗಿ ಹೀಗೆ ದಾಖಲಿಸಬಹುದು.**

೧೯೭೬ ಮಣಿಪುರದಲ್ಲಿ ಅಂಗಾಂಘುಲ್ ಸ್ಮಾರಕ ಉಪನ್ಯಾಸ 'ಮಾರ್ಕ್ಸ್‌ವಾದ ಮತ್ತು ಸಾಹಿತ್ಯ.'

೧೯೮೩ ದೆಹಲಿಯ 'ಸೆಂಟರ್ ಫಾರ್ ದ ಸ್ಟಡಿ ಆಫ್ ಡೆವಲಪಿಂಗ್ ಸೊಸೈಟೀಸ್‌ನಲ್ಲಿ ವಿಚಾರಗೋಷ್ಠಿ -'ಡಾ. ಲೋಹಿಯಾರ ಸಮಾಜವಾದಿ ರಾಜಕೀಯದ ಪ್ರಸ್ತುತತೆ.'

೧೯೮೮ ತಿರುವಲದ ಮಾರ್‌ಥೋಮಾ ಕಾಲೇಜಿನಲ್ಲಿ ಡಾ. ಎ. ವಿ. ವರ್ಗೀಸ್ ಸ್ಮಾರಕ ಉಪನ್ಯಾಸ 'ಭಾರತೀಯ ಸಾಹಿತ್ಯದಲ್ಲಿ ವಸಾಹತುಶಾಹಿ ಅನುಭವ.'

೧೯೮೮ ಬೆಂಗಳೂರಿನಲ್ಲಿ ಕರ್ನಾಟಕ ಸರಕಾರದ ಸಮಾಜಕಲ್ಯಾಣ ಇಲಾಖೆ ಏರ್ಪಡಿಸಿದ ಕಮ್ಮಟ 'ಪೌರ ಹಕ್ಕುಗಳು.'

೧೯೮೯ ಉಡುಪಿಯಲ್ಲಿ 'ರಥಬೀದಿ ಗೆಳೆಯರು' ಏರ್ಪಡಿಸಿದ್ದ 'ನೆಹರೂ ಬದುಕು-ಚಿಂತನೆ' ವಿಚಾರಗೋಷ್ಠಿ.

೧೯೯೦ ನವದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾನಿಲಯದಲ್ಲಿ ವಿಶೇಷ ಉಪನ್ಯಾಸ- 'ಭಾರತದಲ್ಲಿ ಇಂಗ್ಲೀಷ್ ಸಾಹಿತ್ಯದ ಶಿಕ್ಷಣ.'

೧೯೯೦ ಬೆಂಗಳೂರಿನ 'ಸೆಂಟರ್ ಫಾರ್ ಸೋಷಲಿಸ್ಟ್ ಸ್ಟಡೀಸ್'ನಲ್ಲಿ ವಿಚಾರ ಗೋಷ್ಠಿ - ಸಮಾಜವಾದ ಮತ್ತು ಸಾಹಿತ್ಯ.

೧೯೯೦ ಮುಂಬಯಿಯ ಮೊಗವೀರ ಯುವಕ ಸಂಘದಲ್ಲಿ ವಿಶೇಷ ಉಪನ್ಯಾಸಗಳು - ಕನ್ನಡ ಸಾಹಿತ್ಯ ಸ್ಥಿತಿಗತಿ', 'ನಮ್ಮ ಇಂದಿನ ಸಂಸ್ಕೃತಿ.'

೧೯೯೦ ಕೊಟ್ಟಾಯಂನ ನ್ಯಾಶನಲ್ ಇಂಟಗ್ರೇಷನ್ ಕ್ಯಾಂಪ್‌ನಲ್ಲಿ ಉಪನ್ಯಾಸ -'ಭಾರತದ ಯುವಕರು'

೧೯೯೧ ಜೈಪುರದಲ್ಲಿ ಫಿಲಾಸೊಫಿಕಲ್ ಸೊಸೈಟಿ ಆಫ್ ಇಂಡಿಯಾದ ವಿಚಾರ ಗೋಷ್ಠಿ- 'ಸಂಸ್ಕೃತಿ ಮತತು ವಿಚಾರಶೀಲತೆ.'

೧೯೯೧ ನವದೆಹಲಿಯ ಸಾಹಿತ್ಯ ಅಕಾಡೆಮಿಯಲ್ಲಿ ರಾಷ್ಟ್ರೀಯ ವಿಚಾರಗೋಷ್ಠಿ- 'ಭಾರತೀಯ ಸಾಹಿತ್ಯ ಶತಮಾನಾಂತ್ಯದ ಮೌಲ್ಯಮಾಪನ.'

೧೯೯೨ ದೆಹಲಿ ವಿಶ್ವವಿದ್ಯಾನಿಲಯದ ಇಂಗ್ಲೀಷ್ ಎಸೋಸಿಯೇಶನ್‌ನ ಉದ್ಘಾದನಾ ಭಾಷಣ - 'ಭಾರತದಲ್ಲಿ ಒಬ್ಬ ಲೇಖಕನಾಗಿ.'

೧೯೯೩ ನವದೆಹಲಿಯ ನೆರಹೂ ಸ್ಮಾರಕ ಮ್ಯೂಸಿಯಂನಲ್ಲಿ ನೆಹರೂ ಸ್ಮಾರಕ ಉಪನ್ಯಾಸ 'ಭಾರತದಲ್ಲಿ ಸೃಜನಶೀಲ ಲೇಖಕ.'

೧೯೯೩ ಜರ್ಮನಿಯಲ್ಲಿ ನಡೆದ ಅಖಿಲಭಾರತ ಡೋಗ್ರಿ ಲೇಖಕರ ಸಮ್ಮೇಳನದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ.

೧೯೯೮ ಲಂಡನ್‌ನ ನೆಹರೂ ಸೆಂಟರ್‌ನಲ್ಲಿ ಅಂತಾರಾಷ್ಟ್ರೀಯ ಭಾಷಾಂತರ ಗೋಷ್ಠಿ, ಮೂರು ವಿಶೇಷ ಉಪನ್ಯಾಸಗಳು -'ಫ್ಲವರಿಂಗ್ ಆಫ್ ದಿ ಬ್ಯಾಕ್ ಯಾರ್ಡ್.'

**ಅಡಿಟಿಪ್ಪಣಿ**

**ಈ ಲೇಖನ ಭಾಗದ ಮಾಹಿತಿಗಳನ್ನು**

೧ ಅಂತರ್ಜಾಲ www. yahoo.in

೨ ಯು.ಆರ್.ಅನಂತಮೂರ್ತಿ ಒಂದು ಅಧ್ಯಯನ.

೩ ಯು.ಆರ್. ಅನಂತಮೂರ್ತಿ ಒಂದು ವ್ಯಕ್ತಿಚಿತ್ರ ಹಾಗು ವೃತ್ತಪತ್ರಿಕೆಗಳ ಮೂಲಕ ಸಂಗ್ರಹಿಸಿದ್ದೇನೆ.

## ಅಧ್ಯಾಯ - ೪

## ಯು.ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿ 'ಬಂಡಾಯದ ನೆಲೆಗಳು'

- ಗಾಂಧೀಜಿಯವರ ವಿಚಾರಗಳ ಮೂಲಕ ಜನಪರ ಬಂಡಾಯ.
- ಲೋಹಿಯಾರವರ ಚಿಂತನೆಗಳ ಮೂಲಕ ಬಂಡಾಯತ ಚಲನಶೀಲತೆ.
- ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾಮಾಜಿಕ ಕಟ್ಟುಪಾಡುಗಳನ್ನು ಮೀರುವ ಬಂಡಾಯದ ಗುಣಗಳು.

### ಸಂಸ್ಕಾರ

### ಸಂಸ್ಕಾರ - ಗಾಂಧಿ

ಪ್ರಸ್ತುತ ವಿಭಾಗದಲ್ಲಿ ಯು. ಆರ್. ಅನಂತಮೂರ್ತಿಯವರ ಐದು ಕಾದಂಬರಿಗಳಲ್ಲಿ ಗಾಂಧೀವಾದವು ಹೇಗೆ ಬಂಡಾಯದ ಅಂಶವಾಗಿ ಹೊರಹೊಮ್ಮಿದೆ ಎಂಬುದನ್ನು ಗುರುತಿಸಲಾಗಿದೆ.

'ಗಾಂಧೀವಾದ ಎಂದರೇನು?' ಎಂಬುದನ್ನು ಸ್ವತಃ ಗಾಂಧೀಜಿಯವರೇ ಪರಿಚಯಿಸಿಕೊಟ್ಟಿದ್ದಾರೆ. 'ಗಾಂಧೀವಾದ ಎನ್ನುವಂಥದೇನೂ ಇಲ್ಲ, ನನ್ನ ತರುವಾಯ ಅಂಥ ಯಾವುದೇ ಒಂದು ಸಂಪ್ರದಾಯ ಅಥವಾ ಪರಂಪರೆಯನ್ನು ಬಿಟ್ಟು ಹೋಗಬೇಕೆಂಬ ಬಯಕೆಯೂ ನನಗಿಲ್ಲ. ನಾನು ಯಾವುದೋ ಒಂದು ಹೊಸ ತತ್ವವನ್ನೋ, ಸಿದ್ಧಾಂತವನ್ನೋ ತೋರಿಸಿಕೊಡುತ್ತಿದ್ದೇನೆಂದು ನಾನು ಹೇಳಿಕೊಳ್ಳಲಾರೆ. ನನ್ನ ದಿನನಿತ್ಯದ ಬದುಕಿನಲ್ಲಿ ಹಾಗೂ ಪ್ರತಿದಿನ ಎದುರಾಗುವ ಪ್ರಶ್ನೆಗಳ ಸಂದರ್ಭಗಳಲ್ಲಿ ತನ್ನದೇ ಆದ ರೀತಿಯಲ್ಲಿ ಶಾಶ್ವತ ಸತ್ಯಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನಷ್ಟೇ ನಾನು ಮಾಡಿದ್ದೇನೆ. ಜಗತ್ತಿಗೆ ನಾನು ಯಾವುದೇ ಹೊಸ ವಿಚಾರವನ್ನು ಕಲಿಸಿಕೊಡಬೇಕಾಗಿಲ್ಲ. ಸತ್ಯ ಮತ್ತು ಅಹಿಂಸೆ ಅನಾದಿ ಕಾಲದಿಂದ ನಡೆದುಕೊಂಡು ಬಂದಿವೆ.........' ಮುಂದುವರಿದು, "ಮೇಲೆ ನಾನು ಹೇಳಿರುವ ಮಾತುಗಳಲ್ಲಿ ನನ್ನಲ್ಲೆ ತತ್ವಜ್ಞಾನವೂ ನನ್ನ ಈ ಆಲೋಚನೆಗಳಿಗೆ ಇಷ್ಟು ದೊಡ್ಡ ಹೆಸರನ್ನು ಕೊಡಬಹುದಾದರೆ ಸೇರಿಕೊಂಡು ಬಿಡುತ್ತದೆ. ಅದನ್ನು ನೀವು 'ಗಾಂಧೀವಾದ' ಎಂದು ಕರೆಯಬೇಡಿ. ಏಕೆಂದರೆ ಅದರಲ್ಲಿ 'ವಾದ' ಎಂಬುದೇನೂ ಇಲ್ಲ." ಎಂದು ಸ್ವತಃ ಗಾಂಧೀಜಿಯವರೇ ಹೇಳಿದ್ದಾರೆ.[1]

ಜಗತ್ತಿನಲ್ಲಿ ಸಂಘರ್ಷಗಳು ಉಂಟಾಗುತ್ತಿರುವುದಕ್ಕೆ ಬಂಡವಾಳಶಾಹಿ ಆರ್ಥಿಕತೆಯೇ ಮುಖ್ಯ ಕಾರಣ ಎಂಬುದು ಗಾಂಧೀವಾದದ ಅಂಶವಾಗಿದೆ.

ಒಟ್ಟಾರೆಯಾಗಿ ಗಾಂಧೀಜಿಯವರು ಬದುಕಿದ ರೀತಿಯನ್ನು ಗಮನದಲ್ಲಿಟ್ಟುಕೊಂಡು ಚಲನಶೀಲವಾದ ಸಮಾಜದ ಏಳಿಗೆಗಾಗಿ ಆ ಅಂಶಗಳನ್ನು ಬಳಸಿಕೊಳ್ಳುವುದರಲ್ಲಿ ಗಾಂಧೀವಾದವನ್ನು ಕಾಣಬಹುದಾಗಿದೆ. ಅದಕ್ಕೆ ಒಂದು ಮುಖವಿಲ್ಲ. ಸತ್ಯ ಮತ್ತು ಅಹಿಂಸೆ. ಅದರ ಮೂಲ ಅಂಶಗಳಾದರೂ ಸಾಮಾಜಿಕ ಆದರ್ಶ, ಆಧ್ಯಾತ್ಮಿಕತೆ, ಆರ್ಥಿಕ ಸ್ವರೂಪ, ರಾಜಕೀಯ ನೀತಿ, ಯಂತ್ರ ಸಂಸ್ಕೃತಿ, ಸತ್ಯಾಗ್ರಹ ಮುಂತಾ ವಿಷಯಗಳ ಮೂಲಕ ಗಾಂಧೀಜಿಯವರು ಹೊಂದಿದ್ದ ಜನಪರ ಕಾಳಜಿಯು ಅನಂತಮೂರ್ತಿಯವರ ಕಾದಂಬರಿಗಳಲ್ಲಿ ತನ್ನ ಪ್ರಭಾವವನ್ನು ಬೀರಿದೆ. ಮತ್ತು ಆ ಅಂಶವು ಕಾದಂಬರಿಯೊಳಗೆ ಬಂಡಾಯದ ದನಿಯಾಗಿದೆ. ಅವುಗಳನ್ನು ಕೆಳಕಂಡಂತೆ ಗುರುತಿಸಬಹುದಾಗಿದೆ.

ಯುಗಧರ್ಮದ ಜೊತೆಯಲ್ಲಿ ತನ್ನನ್ನು ಗುರುತಿಸಿಕೊಳ್ಳಲಾರದ ಕೃತಿಯು ತನ್ನ ಪ್ರಖರತೆಯನ್ನು ಕಳೆದುಕೊಳ್ಳುತ್ತದೆ ಎಂಬ ಮಾತು ಸಾಹಿತ್ಯದಲ್ಲಿ ಸತ್ಯವಾಗಿದೆ. ಎಂದರೆ ಕಾಲಘಟ್ಟವೊಂದರಲ್ಲಿ ರಚಿತವಾದ ಸಾಹಿತ್ಯವು ತನ್ನ ಕಾಲದ ಸಾಮಾಜಿಕ ಜೀವನನ್ನು ತನ್ನೊಳಗೆ ತಂದುಕೊಂಡಿರುತ್ತದೆ. ಏಕೆಂದರೆ ಸಾಹಿತ್ಯ ಎಂದೆಂದೂ ಸಮಾಜದಿಂದ ರೂಪುಗೊಂಡದ್ದು.

೧೯೬೫ರಲ್ಲಿ ಪ್ರಕಟವಾದ ಸಂಸ್ಕಾರ ಕಾದಂಬರಿಯಲ್ಲಿ ಕಂಡುಬರುವ ಜನಜೀವನವು ಸುಮಾರು ೧೯೪೫-೪೬ ಇರಬಹುದೆಂದು ಕೆ.ವಿ. ಸುಬ್ಬಣ್ಣನವರು ಅಭಿಪ್ರಾಯ ಪಡುತ್ತಾರೆ. ಸಹಜವಾಗಿಯೇ ಸ್ವತಂತ್ರ್ಯಪೂರ್ವದ ಆ ದಿನಗಳು ಗಾಂಧೀಜಿಯವರಿಂದ ಪ್ರಭಾವಿತವಾಗಿದ್ದವು. ಕಾದಂಬರಿಯಲ್ಲಿನ ಕೆಲ ಘಟನೆಗಳನ್ನು ಆ ನಿಟ್ಟಿನಲ್ಲಿ ನೋಡೋಣ.

ಅತ್ಯಂತ ಶಿಸ್ತುಬದ್ಧ ಜೀವನವನ್ನು ನಡೆಸಿರುವ ಅಗ್ರಹಾರದ ಪ್ರಮುಖರೂ ಆದ ಪ್ರಾಣೇಶಾಚಾರ್ಯರ ಜೀವನವು ಲೌಕಿಕ ಜೀವನಕ್ಕಿಂತ ಹೆಚ್ಚಾಗಿ ಪೌರಲಾಕಿಕದ ಆಸಕ್ತಿಯಿಂದ ರೂಪುಗೊಂಡದ್ದು. ಪ್ರಾಣೇಶಾಚಾರ್ಯರು ನಡೆದುಕೊಳ್ಳುವ ರೀತಿ-ನೀತಿಗಳಲ್ಲಿ ಪಾಪ, ಪುಣ್ಯ, ಮುಕ್ತಿ ಮುಂತಾದ ವಿಷಯಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಆಧ್ಯಾತ್ಮದ ಬಗೆಗೆ ತಮ್ಮ ಮನಸ್ಸನ್ನು, ಜೀವನವನ್ನು ಕೇಂದ್ರೀಕರಿಸುತ್ತಾರೆ. ತಾವೇ ಬಯಸೀ ಬಯಸಿ ರೋಗಿಷ್ಠೆಯನ್ನು ವರಿಸುತ್ತಾರೆ. ತಮ್ಮ ಹೆಂಡತಿಯ ರೋಗದ ಕಾರಣದಿಂದ ಸುಖಜೀವನದಿಂದ ವಂಚಿತರಾದರೂ ಅದನ್ನು ಅವರು 'ನಾನು ಇನ್ನಷ್ಟು ಹದವಾದೆ'ಎಂದು ಹಿಗ್ಗುತ್ತಾರೆ.

ಈ ರೀತಿಯ ಜೀವನವನ್ನು ಅತ್ಯಂತ ಸಹನೀಯವಾಗಿ ನಡೆಸಿಕೊಂಡು ಬರುವ ಪ್ರಾಣೇಶಾಚಾರ್ಯರು ಪ್ರಾಮಾಣಿಕರೂ, ಸತ್ಯಸಂಧರೂ ಆಗಿರುವುದು, ನ್ಯಾಯಪಕ್ಷಪಾತಿಯಾಗಿರುವುದೋ ಅನೇಕ ಅಂಶಗಳಲ್ಲಿ ಕಂಡು ಬರುತ್ತದೆ.

ಆದರೆ ಈ ಸಹನೀಯ ಜೀವನ ನಡೆಸುವ ಉದ್ದೇಶ ಈ ಜಗತ್ತಿನಿಂದ ಬಿಡುಗಡೆ ಪಡೆಯಲು ಮಾಡುವ ಕೆಲಸಗಳಂತೆ ಕಂಡು ಬರುತ್ತದೆ. ಹೆಂಡತಿಗೆ ಮಾಡುವ ಸೇವೆ, ಅಗ್ರಹಾರದವರೊಂದಿಗಿನ ಸಹಜೀವನ ಇವೆಲ್ಲ ಆಧ್ಯಾತ್ಮ ಸಾಧನೆಗೆ ಬೇಕಾದ ಪರಿಕರಗಳಂತೆ ಕಂಡು ಬರುತ್ತದೆ. ಆದರೆ ಗರುಡಾಚಾರ್ಯ, ದುರ್ಗಾಭಟ್ಟ ಮುಂತಾದ ಸಮಯ ಸಾಧಕರಿರುವ ಅಗ್ರಹಾರದಲ್ಲಿ ಪ್ರಾಣೇಶಾಚಾರ್ಯರ ನಡವಳಿಕೆ ಒಂದು ರೀತಿಯಲ್ಲಿ ನಿರುಪದ್ರವಿಯಾದುದಾಗಿದೆ. ಪ್ರಾಣೇಶಾಚಾರ್ಯರು ತಮ್ಮತನವನ್ನು ಉಳಿಸಿಕೊಳ್ಳಲು ಹೆಣಗಾಡುತ್ತಾರೆ. ಇತರರ ಬಗೆಗೆ ಒಂದು ರೀತಿಯ ತಿರಸ್ಕಾರವನ್ನು ಬೆಳೆಸಿಕೊಂಡಿರುತ್ತಾರೆ.

ಕಾದಂಬರಿಯ ಪ್ರಾರಂಭಕ್ಕೇ ನಾರಣಪ್ಪ ಸತ್ತು ಅವನಿಗೊಂದು ವಿಧಿವತ್ತಾದ ಸಂಸ್ಕಾರ ಮಾಡಬೇಕೆ, ಬೇಡವೆ? ಎಂಬ ಬಗ್ಗೆ ಚರ್ಚೆ ಪ್ರಾರಂಭವಾಗುತ್ತದೆ. ಆದರೆ ಅಲ್ಲಿ ಧರ್ಮಶಾಸ್ತ್ರಗಳ ವಿಚಾರವನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಅನುಕೂಲಗಗಳಿಗಾಗಿ ಬಳಸಿಕೊಳ್ಳುತ್ತಾರೆ. ಆದರೆ ಅದೇ ಸನ್ನಿವೇಶದಲ್ಲಿ ಪ್ರಾಣೇಶಾಚಾರ್ಯರು ಧರ್ಮಶಾಸ್ತ್ರದ ಮೊರೆ ಹೋಗುತ್ತಾರೆ.

ಸತ್ತ ನಾರಣಪ್ಪನಿಗೊಂದು ಸಂಸ್ಕಾರ ಮಾಡಲು ಧರ್ಮಶಾಸ್ತ್ರಗಳ ಮೊರೆಹೋಗುವ ಪ್ರಾಣೇಶಾಚಾರ್ಯರು ಮುಂದೆ ಚಂದ್ರಿಯೊಂದಿಗೆ ನಡೆದುಕೊಳ್ಳುವ ರೀತಿ ಇವುಗಳನ್ನು ಗಮನಿಸಿದಾಗ ನಮ್ಮ ಸಂಸ್ಕೃತಿಯ ಮೌಲ್ಯಗಳನ್ನು ಪರೀಕ್ಷಿಸುವ, ಪ್ರಶ್ನಿಸುವ ಕೆಲಸವನ್ನು 'ಸಂಸ್ಕಾರ' ಮಾಡಿದೆ ಎಂದೆನಿಸುತ್ತದೆ. ಒಟ್ಟು ಕಥೆಯ ಹಂದರದಲ್ಲಿ ಪ್ರಾಣೇಶಾಚಾರ್ಯರನ್ನು ಮೊದಲ ಭಾಗದಲ್ಲಿ ಚಿತ್ರಿಸಿರುವ ರೀತಿಯು ಮುಂದಿನ ಕಥೆಯ ಓಟಕ್ಕೆ ನೆರವಾಗಿದೆ ಎನ್ನಬಹುದು.

ಕಾದಂಬರಿಯಲ್ಲಿ ಪ್ರಕಟವಾಗಿರುವ ಸಮಾಜವು ಸ್ವತಂತ್ರ್ಯಪೂರ್ವದ ಹಳ್ಳಿಯೊಂದರ ಜೀವನ, ಆ ಸಂದರ್ಭದಲ್ಲಿ ಇಡೀ ದೂರ್ವಾಸಪುರದ ಜನರು ತಮ್ಮ ಹಳ್ಳಿಯನ್ನು ದುರ್ಬಲಗೊಳಿಸುತ್ತಿರುವ ಕುಡಿತ ಮುಂತಾದ ದುಶ್ಚಟಗಳ ವಿರುದ್ಧವಾಗಿ ಸಂಘಟನೆಗೊಳ್ಳದೆ, ತಮ್ಮದೇ ಪರಿಸರದಲ್ಲಿ ಬಹು ಹಿಂದಿನಿಂದಲೂ ಸಹಜೀವನ ನಡೆಸುತ್ತಿದ್ದ ಇತರ ದುರ್ಬಲ ಗುಂಪುಗಳ ವಿರುದ್ಧ ಮತ ಧರ್ಮಗಳನ್ನು ಬಳಸಿಕೊಳ್ಳುವುದನ್ನು ಕಾಣಬಹುದು.

ಪ್ರಾಣೇಶಾಚಾರ್ಯರು ಹೆಂಡತಿಯ ನಿಧನಾನಂತರ ಕಾಲು ಕೊಂಡೊಯ್ದಲ್ಲಿಗೆ ಹೋಗಬೇಕೆಂದು ತೀರ್ಮಾನಿಸಿದರೂ ಪಿತೃಋಣ, ಗುರುಋಣ, ದೇವಋಣವನ್ನು ಬಿಡಬೇಕೆಂದು ಕೊಳ್ಳುತ್ತಾರೆಯೇ ಹೊರತು ಸಾಮಾಜಿಕ ನೆಲೆಯಲ್ಲಿ ಆಲೋಚಿಸುವುದಿಲ್ಲ. ಮೊದಲೇ ಸಂಪ್ರದಾಯ, ವೇದ, ಶಾಸ್ತ್ರಗಳಲ್ಲಿ ತಲ್ಲೀನರಾಗಿದ್ದ ಪ್ರಾಣೇಶಾಚಾರ್ಯರು ಈಗ ಲೌಕಿಕ ಸುಖವೆಲ್ಲವನ್ನೂ ಕಡೆಗಣಿಸಿ ಮುಕ್ತಿಗಾಗಿ ಹಂಬಲಿಸುತ್ತಾರೆ. ಸ್ವತಂತ್ರ್ಯದ ಸುಖವನ್ನು, ತನ್ನ ಜನರಿಂದ ಬಿಡುಗಡೆಯನ್ನು ಪಡೆಯುವ ಸಲುವಾಗಿ ಅಜ್ಞಾತವಾಗಿರಲು ಬಯಸುತ್ತಾರೆ.

ಮೂಢ ನಂಬಿಕೆ, ಅಸಮಾನತೆ ಮುಂತಾದ ವಿಷಯಗಳನ್ನು ಪ್ರಾಣೇಶಾಚಾರ್ಯರು ತ್ಯಜಿಸುತ್ತಾರಾದರೂ ಅದನ್ನು ಸಮಾಜಕ್ಕೆ ಹೇಳಲಾರದೆ ಹೊಗುತ್ತಾರೆ. ಮಾಲೇರ ಪುಟ್ಟ ಪ್ರಾಣೇಶಾಚಾರ್ಯರನ್ನು ಪರಿಚಯ ಮಾಡಿಕೊಳ್ಳುವ ಸಲುವಾಗಿ ಅವರಿಗೆ ಒಗಟು ಬಿಡಿಸುವಂತೆ ಕೇಳುತ್ತಾನೆ. ಅವನೊಂದಿಗೆ ಹೀಗೆ ಮಾತಿಗಿಳಿಯುವುದರಿಂದ ತನ್ನ ಗುರುತನ್ನು ಹೇಳಬೇಕಾಗುತ್ತದೆಂದು ಮಾತನಾಡದೆ ಸುಮ್ಮನಾಗುತ್ತಾರೆ. ಮಾಲೇರಪುಟ್ಟನೊಂದಿಗೆ ಜಾತ್ರೆಯಲ್ಲಿ ಸುತ್ತಿದರೂ ತನ್ನ ಗುರುತನ್ನು ಹೇಳಿಕೊಳ್ಳುವುದಿಲ್ಲ.

ವೈಯಕ್ತಿಕ ನೆಲೆಯಲ್ಲಿ ಪ್ರಾಣೇಶಾಚಾರ್ಯರು ತಮ್ಮ ಇತಿಮಿತಿಗಳನ್ನು ದಾಟುತ್ತಾರಾದರೂ ಸಾಮಾಜಿಕವಾಗಿ ಅದನ್ನು 'ಬಂಡಾಯ' ಎಂದು ಗುರುತಿಸುವುದು ಕಷ್ಟವಾಗುತ್ತದೆ. ಚಂದ್ರಿ ಮತ್ತು ನಾರಣಪ್ಪನ ನಡುವಿನ ಸಂಬಂಧವು ಕಾಮದ ಮಟ್ಟದಲ್ಲಿಯೇ ಉಳಿದು 'ಬಂಡಾಯ' ಎಂಬ ಹಂತವನ್ನು ತಲುಪುವಲ್ಲಿ ವಿಫಲವಾಗುತ್ತದೆ. ನಾರಣಪ್ಪನೊಂದಿಗೇ ಅಗ್ರಹಾರದ ಇತರರಿಂದ ಅವಳು ಪ್ರತ್ಯೇಕವಾಗಿಯೇ ಉಳಿಯುತ್ತಾಳೆ. ಚಂದ್ರಿಯ ಮಾನವೀಯತೆಯ ಗುಣಗಳು ಗೌಣವಾಗುತ್ತದೆ.

ಪ್ರಮುಖ ಪಾತ್ರಗಳನ್ನು ಬದಿಗಿಟ್ಟು ದೂರ್ವಾಸಪುರದ ಸಮಾಜವನ್ನು ಗಮನಿಸುವುದಾದರೆ ಅಗ್ರಹಾರದ ಸಾಮಾನ್ಯರು ಮತ್ತು ದೂರ್ವಾಸಪುರದ ಒಟ್ಟು ಜನಸಮೂಹ ನಾರಣಪ್ಪ, ಚಂದ್ರಿ, ಮತ್ತು ಪ್ರಾಣೇಶಾಚಾರ್ಯ ಈ ಮೂರೂ ಪಾತ್ರಗಳನ್ನು ಒಂದು ರೀತಿಯ ಹಿಡಿತದಲ್ಲಿಟ್ಟಿದೆ ಎನ್ನಬಹುದು.

ಪ್ರಾಣೇಶಾಚಾರ್ಯರನ್ನು ಆದರ್ಶವೆಂದು ಪರಿಗಣಿಸುವ ಈ ಜನ ಅವರನ್ನು ಒಂದೇ ಒಂದು ಘಳಿಗೆಯೂ ಅದರಿಂದ ಹೊರಬರದಂತೆ ಅಪ್ರತ್ಯಕ್ಷವಾಗಿ ಹಿಂಬಾಲಿಸುತ್ತಾರೆ. ಪ್ರಾಣೇಶಾಚಾರ್ಯರೂ ಹಲವು ವೇಳೆ ಜನರು ಏನೆಂದುಕೊಂಡಾರು ಎಂಬಂತೆ ತಮ್ಮ ನಡವಳಿಕೆಯನ್ನು ತಿದ್ದಿಕೊಳ್ಳುತ್ತಾ ಹೋಗುತ್ತಾರೆ. ಚಂದ್ರಿಗೆ ತಮ್ಮ ಮನೆಯ ಜಗುಲಿಯಲ್ಲಿ ರಾತ್ರಿ ಉಳಿಯಲು ಹೇಳುತ್ತಾರೆ. ಅದಕ್ಕಿಂತ ಹೆಚ್ಚಿನ ಮಾನವೀಯತೆಯಿಂದ ನಡೆದುಕೊಳ್ಳಲು ಅವರ ಸುತ್ತಲಿನ ಪರಿಸರ ಸಹಾಯಕವಾಗಿರುವುದಿಲ್ಲ. ಆ ಸಂದರ್ಭದಲ್ಲಿ ಸುತ್ತಲಿನ ಪರಿಸರ ಅವರನ್ನು ಒಂದಿನಿತೂ ಅಲುಗದಂತೆ ಕಟ್ಟಿ ಹಾಕುತ್ತದೆ.

ಇನ್ನು ಚಂದ್ರಿಯ ಸಂಪರ್ಕ ಮಾತ್ರ ಪ್ರಾಣೇಶಾಚಾರ್ಯರನ್ನು ಊರು ಬಿಡುವಂತೆ ಮಾಡುವುದಿಲ್ಲ. ಬದಲಿಗೆ ತಾನು ಹೊತ್ತ ಸಾಮಾಜಿಕ ಹೊಣೆ, ಅದನ್ನು ನಿರ್ವಹಿಸಲಾರದ ಸಂದರ್ಭ, ಅದಕ್ಕೂ ಮುಖ್ಯವಾಗಿ ತನ್ನೂರಿನ ಜನರ ಮುಂದೆ ನಿರುತ್ತರನಾಗಿ ನಿಲ್ಲಬೇಕಾದ ಅನಿವಾರ್ಯ, ಇವು ಅವರನ್ನು ಕಾಡುತ್ತವೆ. ಇಷ್ಟಕ್ಕೂ ಜನರು ಆ ಸಂದರ್ಭದಲ್ಲಿ ಪ್ರಾಣೇಶಾಚಾರ್ಯರಿಂದ ನಿರೀಕ್ಷಿಸಿದ್ದು ನಾರಣಪ್ಪನ ಸಂಸ್ಕಾರ ಯಾರಿಂದ ಆಗಬೇಕು ಎಂಬುದಕ್ಕೆ ಉತ್ತರವನ್ನು ಮಾತ್ರ. ಆದರೆ ಪ್ರಾಣೇಶಾಚಾರ್ಯರು ಚಂದ್ರಿಯೊಡನೆ ದೈಹಿಕ ಸಂಪರ್ಕ ಹೊಂದಿದ ಕಾರಣದಿಂದಾಗಿ ತಮ್ಮ ನೈತಿಕ ಮೌಲ್ಯಗಳಿಗೆ ಕುಂದುಂಟಾಯಿತೆಂದು ಕಂಗಾಲಾಗುತ್ತಾರೆ. ಜನರ ಕಣ್ಣಲ್ಲಿ ಆದರ್ಶವಾಗಿಯೇ ಉಳಿಯುವ ಪ್ರಯತ್ನದಲ್ಲಿ ತೊಡಗುತ್ತಾರೆ. ಕೊನೆಗೆ ತಮ್ಮ ಹೆಸರನ್ನೂ ಹೇಳಿಕೊಳ್ಳದೆ

ಅಜ್ಞಾತರಾಗಲು ಪ್ರಯತ್ನಿಸುತ್ತಾರೆ. ಈ ಸನ್ನಿವೇಶದಲ್ಲಿ ವೈಯಕ್ತಿಕ ಅಭಿಪ್ರಾಯದ ಪ್ರಶ್ನೆ ಇರುವಂತೆಯೇ ಪ್ರಾಮಾಣಿಕತೆ, ಸತ್ಯ, ಸಾಮಾಜಿಕ ಮೌಲ್ಯಗಳನ್ನು ಉಳಿಸಿಕೊಳ್ಳುವಲ್ಲಿ ಪ್ರಾಣೇಶಾಚಾರ್ಯರಂತೆಯೇ ಸಮಾಜವೂ ಪ್ರಯತ್ನಶೀಲವಾಗಿದೆ. ಅದನ್ನು ಪರೋಕ್ಷವಾಗಿ ಪ್ರಾಣೇಶಾಚಾರ್ಯರ ನಡವಳಿಕೆಯ ಮೂಲಕ ಕಾಣಬಹುದಾಗಿದೆ.

ಹಾಗೆಯೇ ನಾರಣಪ್ಪನಿಂದ, ಅವನಂತಹ ಜನರಿಂದ ಸಮಾಜದ ಎಲ್ಲ ವರ್ಗದಿಂದ ಪ್ರಾಣೇಶಾಚಾರ್ಯರು ಬಯಸುವುದು ಗಾಂಧೀವಾದವೆನ್ನುವ ಅಥವಾ ಸತ್ಯ, ಅಹಿಂಸೆ, ಸಮಾನತೆ ಎನ್ನುವ ಬಂಡಾಯವನ್ನೇ. ನಾರಣಪ್ಪ ಬ್ರಾಹ್ಮಣನಾಗಿದ್ದು ಎಲ್ಲ ಜಾತಿ, ವರ್ಗದವರೊಡನೆ ಸೇರುವುದು ಯಾವುದೇ ಸದುದ್ದೇಶದಿಂದಲ್ಲ. ಪ್ರಾಣೇಶಾಚಾರ್ಯರನ್ನು ಟೀಕಿಸಿದರೂ, ಪ್ರಶ್ನಿಸಿದರೂ ನಾರಣಪ್ಪನದು ಹುಸಿ ಆದರ್ಶವಾಗೇ ನಿಲ್ಲುತ್ತದೆ. ಹಾಗೆಯೇ ಚಂದ್ರಿ ಅವನ ಶವವನ್ನು ಸಂಸ್ಕಾರ ಮಾಡುವುದು ತಾನು ಅನುಭವಿಸಿದ ಜೀವ ಎಂಬ ಕಾರಣಕ್ಕೆ ಹಾಗೂ ಸಂಸ್ಕಾರಗೊಳ್ಳದೆ ಉಳಿದಲ್ಲಿ ಆ ಅಪವಾದವನ್ನು ತಾನು ಎದುರಿಸಬೇಕಾದೀತೆಂದು. ಅವಳಲ್ಲಿ ಮಾನವೀಯತೆ ಇದ್ದರೂ ತಾನು ಕಟ್ಟಿಕೊಂಡ ಅಪರಾಧಿ ಮನೋಭಾವದಿಂದ ತಪ್ಪಿಸಿಕೊಳ್ಳಲು ಆ ಸಂಸ್ಕಾರ ನೆರವಾಗುತ್ತದೆ.

ಸದಾ ಆದರ್ಶದ ನಿರೀಕ್ಷೆಯಲ್ಲಿರುವ ಸಮಾಜವೊಂದು ಪರೋಕ್ಷವಾಗಿ ಬಂಡಾಯಕ್ಕಾಗಿ ಸದ್ದಿಲ್ಲದೆ ದುಡಿಯುತ್ತದೆ. ಚಂದ್ರಿ, ಪ್ರಾಣೇಶಾಚಾರ್ಯ ನಾರಣಪ್ಪ ಎಲ್ಲರೂ ನಿಯಂತಿರಗೊಂಡಿರುವುದು ತಮ್ಮ ಸುತ್ತಲಿನ ಸಮಾಜದಿಂದ, ಅವರಿಂದ ಸಾಮಾಜಿಕ ಮೌಲ್ಯಗಳೆಂಬ ಬಂಡಾಯವನ್ನು ಆ ಸಮಾಜ ನಿರೀಕ್ಷಿಸುತ್ತಲೇ ತಮಗೆ ಬೇಕಾದ ಸಾಮಾಜಿಕ ಬಿಡುಗಡೆಗಾಗಿ ಪ್ರಯತ್ನಿಸುತ್ತದೆ.

ಚಂದ್ರಿಯ ವಿಷಯವಾಗಿ ಪರ ವಿರೋಧವಾಗಿ ಪ್ರತಿಕ್ರಿಯಿಸುವ ದೂರ್ವಾಸಪುರ ಬೆಳ್ಳಿಯ ವಿಷಯವಾಗಿ ಚಕಾರವೆತ್ತುವುದಿಲ್ಲ. ಸಹಜವೆಂಬಂತೆ ಇದ್ದು ಬಿಡುತ್ತದೆ. ಒಂದು ಕಡೆ ನಾರಣಪ್ಪ, ಪ್ರಾಣೇಶಾಚಾರ್ಯರಲ್ಲಿ ಆದರ್ಶವನ್ನು ನಿರೀಕ್ಷಿಸಿದರೆ ಮತ್ತೊಂದು ಕಡೆ ಅಗ್ರಹಾರದ ಇತರರ ದಬ್ಬಾಳಿಕೆಗೆ ಪ್ರತಿರೋಧವನ್ನು ಒಡ್ಡುವುದಿಲ್ಲ. ಪ್ರಾಣೇಶಾಚಾರ್ಯರು ಊರುಬಿಟ್ಟು ಹೋಗುವ ಸನ್ನಿವೇಶವನ್ನು ಗಮನಿಸಿದರೆ ಅವರು ವೈಯಕ್ತಿಕ ಕಾರಣಕ್ಕಾಗಿ ಮಾತ್ರ ಊರು ಬಿಡುವುದಿಲ್ಲ. ಅವರಲ್ಲಿ ಒಂದು ಸಮೂಹಪ್ರಜ್ಞೆ ಇರುತ್ತದೆ. ತನಗೆ ಅಂಟಿದ ನಾರಣಪ್ಪನ ಗುಣಾವಗುಣಗಳಿಂದ ವೈಯಕ್ತಿಕವಾಗಿ ಪಾಪಪ್ರಜ್ಞೆಗೋ, ಸಾಮಾಜಿಕ ಜೀವನದಲ್ಲಿ ತಲೆಹಾಕದ ಪರಿಸ್ಥಿತಿಗೂ ತಲುಪುತ್ತಾರೆ. ಒಂದು ಸಮೂಹವನ್ನು ಮುನ್ನಡೆಸಲು ಬೇಕಾದ ನೈತಿಕತೆಯ ಕೊರತೆಯಿಂದ ಮಂಕಾಗುತ್ತಾರೆ.

ಆದರೆ ಇಡೀ ದೂರ್ವಾಸಪುರ ಬಯಸುವುದು ಪ್ರಾಣೇಶಾಚಾರ್ಯನ ಪ್ರಾಮಾಣಿಕತೆಯನ್ನು. ಅದರ ನಿರೀಕ್ಷೆಯಲ್ಲಿಯೇ ಇಡೀ ಸಮೂಹ ಇರುತ್ತದೆ. ಮತ್ತು ನಾರಣಪ್ಪ ಚಂದ್ರಿಯೊಟ್ಟಿಗೆ ಹೊಂದಿದ್ದ ಅನೈತಿಕ

ಸಂಬಂಧವನ್ನು ಮಾತ್ರವಲ್ಲದೆ ಕುಡಿತ ಮುಂತಾದ ದುಶ್ಚಟಗಳನ್ನು ಎಲ್ಲರೂ ವಿರೋಧಿಸುತ್ತಾರೆ.

ಪ್ರಾಣೇಶಾಚಾರ್ಯ ಹಾಗೂ ನಾರಣಪ್ಪ ಇಬ್ಬರಿಂದಲೂ ಜನ ಬಯಸುವುದು ಪ್ರಾಮಾಣಿಕ ಜೀವನವನ್ನೆ. ಈ ಸಮೂಹದ ಅಪೇಕ್ಷೆ ಇಲ್ಲಿ ಅವರಿಗರಿವಿಲ್ಲದೆ ಗಾಂಧೀವಾದವೇ ಆಗಿದೆ. ಮೊದಲೆ ಹೇಳಿದಂತೆ ಗಾಂಧೀವಾದವೆಂದರೆ ಸಮಾನತೆ, ಶಾಶ್ವತ ಸತ್ಯಗಳನ್ನು ಕಂಡುಕೊಳ್ಳುವ ಪ್ರಯತ್ನವಷ್ಟೆ. ಯಾವುದು ಪ್ರಾಣೇಶಾಚಾರ್ಯರ ದೃಷ್ಟಿಯಲ್ಲಿ ಮುಕ್ತಿವರ್ಗಕ್ಕೆ ಬೇಕಾದ ಸದಾಚಾರ, ಸನ್ನಡತೆ ಆಗಿದೆಯೋ ಅದೇ ವಿಚಾರಗಳು ಎಂದರೆ ಸಾಮಾಜಿಕ ಸಮಾನತೆ, ಸನ್ನಡತೆ ಮುಂತಾದ ವಿಷಯಗಳು ಜನ ಸಾಮಾನ್ಯರ ದೃಷ್ಟಿಯಲ್ಲಿ 'ಬಂಡಾಯ'ವಾಗಿದೆ. ಒಂದು ವೈಯಕ್ತಿಕ ದಾರಿ ಮತ್ತೊಂದು ಸಾಮಾಜಿಕ ಪ್ರಯತ್ನ.

ಗಾಂಧೀವಾದ ಅಥವಾ ವಿಚಾರ ಎನ್ನುವುದು ಗಾಂಧಿಗೂ ಮೊದಲೇ ಬಳಕೆಯಲ್ಲಿದ್ದ ಸತ್ಯ, ಅಹಿಂಸೆ, ಸಮಾನತೆ ಎಂಬ ಅಂಶಗಳಿಂದ ಪ್ರೇರಿತವಾಗಿದ್ದು ಆ ಅಂಶಗಳನ್ನು ಸಂಸ್ಕಾರ ಕಾದಂಬರಿಯಲ್ಲಿ ಎಲ್ಲರೂ ಹುಡುಕುತ್ತಿರುವ, ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಿರುವ 'ಬಂಡಾಯ' ಎಂದು ಗುರುತಿಸಬಹುದು. ಅದು ಎಲ್ಲರೂ ಎಲ್ಲರಿಗಾಗಿ ಹುಡುಕುತ್ತಿರುವ ಒಂದು ಮೌಲ್ಯ. 'ಸಂಸ್ಕಾರ'ದಲ್ಲಿ ಜನಪರವಾಗಿ ಆಲೋಚಿಸಿದ ಇಂತಹ ಅಂಶಗಳನ್ನು ಬಂಡಾಯವಾಗಿ ಗುರುತಿಸಲು ಸಾಧ್ಯ.

೧೯೬೫ರಲ್ಲಿ ಸಂಸ್ಕಾರ ಪ್ರಕಟವಾದ ಸಂದರ್ಭದಲ್ಲಿ ಹೊಸಗನ್ನಡ ಸಾಹಿತ್ಯದಲ್ಲಿ ಬಂಡಾಯದ ಪ್ರಬಲಗಾಳಿ ಇನ್ನೂ ಬೀಸಿರಲಿಲ್ಲ ಎಂದು ಹೇಳಬಹುದು. ಜೊತೆಗೆ ಕಾದಂಬರಿಯಲ್ಲಿ ಇರುವ ಸಮಾಜದ ಕಾಲಘಟ್ಟದಲ್ಲಿ ದೂರ್ವಾಸಪುರದಂತಹ ಹಳ್ಳಿಯಲ್ಲಿ ಇರುವ ಮಿತಿಗಳ ನಡುವೆ ಬಂಡಾಯ ತನ್ನ ಮೊದಲ ಹೆಜ್ಜೆಯನ್ನು ಮಾತ್ರ ಇಟ್ಟಿದೆ ಎಂದು ಹೇಳಬಹುದು. ಗಾಂಧೀವಾದವು ಇಲ್ಲಿ ಸಾಮಾಜಿಕವಾಗಿ ಪೂರ್ಣಪ್ರಮಾಣದಲ್ಲಿ ಸಫಲವಾಗಿಲ್ಲ. ಆದರೆ ಮುಂಬರುವ ಬಂಡಾಯ ಸಾಹಿತ್ಯದ ದಾರಿಯಲ್ಲಿ ಒಂದು ಪ್ರಮುಖ ಹೆಜ್ಜೆಯಾಗಿದೆ.

### ಸಂಸ್ಕಾರ -ಪ್ರಜಾಪ್ರಭುತ್ವ

ಬಲವಾಗಿ ಜಾತೀಯತೆಯನ್ನು ನಂಬುವ ಅಗ್ರಹಾರದ ಬ್ರಾಹ್ಮಣರೂ ಕೂಡ ಸರ್ಕಾರಿ ಕಾಯಿದೆಗಳಿಗೆ ಒಳಪಡಬೇಕಾಗಿದೆ. ಇಲ್ಲಿ ಸರ್ಕಾರದ ಕಾನೂನು ಒಂದು ಬಂಡಾಯದ ಅಂಶವಾಗಿ ಒಂದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಬೆಲೆಯನ್ನು ನೀಡಿದೆ. 'ನಾರಣಪ್ಪ ತುರಕಾ ಆಗಿಬಿಟ್ಟಿದ್ದರೆ ಅವನನ್ನ ಅಗ್ರಹಾರದಿಂದ ಓಡಿಸೋದಕ್ಕೆ ಕಾಯಿದೆಯೂ ಇಲ್ಲ'[2] ಎಂಬ ಮಾತುಗಳು ಇದಕ್ಕೆ ಸಾಕ್ಷಿ. ವೈಯಕ್ತಿಕ ಅಭಿಪ್ರಾಯ ಸ್ವಾತಂತ್ರ್ಯ ಪ್ರಜಾಪ್ರಭುತ್ವದ ಪ್ರಮುಖ ಲಕ್ಷಣವಾಗಿದ್ದು ಅದು ನೇರವಾಗಿ ಈ ದೂರ್ವಾಸಪುರದ ಜೀವನದಲ್ಲಿ ಪ್ರಭಾವ ಬೀರಿದೆ. ಪ್ರಜಾಪ್ರಭುತ್ವ ಕಟ್ಟಿಕೊಟ್ಟ ಕಾನೂನು ಇಲ್ಲಿ ಸಾಮಾಜಿಕ ಸಮಾನತೆಯನ್ನು ವ್ಯಕ್ತಿ ಸ್ವಾತಂತ್ರ್ಯವನ್ನು ಕಾಪಾಡುವಲ್ಲಿ

ಯಶಸ್ವಿಯಾಗಿದ್ದು, ಆ ಸಮಾಜದಲ್ಲಿ ಅದು ಬಂಡಾಯವಾಗಿ ವರ್ತಿಸಿದೆ.

## ಭಾರತೀಪುರ

### ಭಾರತೀಪುರ - ಲೋಹಿಯಾ

ಯು. ಆರ್. ಅನಂತಮೂರ್ತಿಯವರ ೨ನೇ ಕಾದಂಬರಿಯಾದ 'ಭಾರತೀಪುರ' ೧೯೭೩ರಲ್ಲಿ ಪ್ರಕಟಗೊಂಡಿತು. ಆ ಹೊತ್ತಿಗಾಗಲೇ ಕನ್ನಡದಲ್ಲಿ ಬಂಡಾಯ ಸಾಹಿತ್ಯವು ಹೊಸ ತಿರುವನ್ನು ಉಂಟು ಮಾಡಿತ್ತು. ಅನಂತಮೂರ್ತಿಯವರು ನವ್ಯ ಸಾಹಿತ್ಯದ ಪ್ರಮುಖ ಲೇಖಕರಾದರೂ ಸಾಹಿತ್ಯ ಸೃಷ್ಠಿಯ ಮಾರ್ಗದಲ್ಲಿ ಬದಲಾವಣೆಯನ್ನು ಸ್ವಾಗತಿಸಿದ್ದರು. ತಮ್ಮ ಸಾಹಿತ್ಯದಲ್ಲಿ ನವ್ಯತೆಯ ಮುಖ್ಯ ಗುಣಗಳಲ್ಲಿ ಒಂದಾದ ವ್ಯಕ್ತಿನಿಷ್ಠತೆಗೆ ಪ್ರಾಮುಖ್ಯತೆಯನ್ನು ನೀಡುತ್ತಲೇ ಬಂಡಾಯದ ಸಮೂಹ ಹಿತಾಸಕ್ತಿಯನ್ನು ಒಪ್ಪಿಕೊಂಡಿದ್ದಾರೆ. ತಮ್ಮ ಕಾದಂಬರಿಯ ಅನೇಕ ಪಾತ್ರಗಳು ಭವಿಷ್ಯದಲ್ಲಿ ರೂಪುಗೊಳ್ಳುವ ಸಾಮಾಜಿಕ ಸಮಾನತೆಗಾಗಿ ಹಂಬಲಿಸುತ್ತವೆ. ಅದಕ್ಕಾಗಿ ದುಡಿಯುತ್ತವೆ.

ಯಾವುದೇ ಒಂದು ಜನಾಂಗವು ತನ್ನ ಹಿಂದಿನ ಅನುಭವಗಳಿಂದ ರೂಪುಗೊಂಡಿರುತ್ತದೆ. ಹಿಂದೆ ನಡೆದ ದಬ್ಬಾಳಿಕೆಯಿಂದ ಮುಕ್ತಿಯನ್ನು ಹೊಂದಿ ಸಾಮಾಜಿಕ, ಆರ್ಥಿಕ ಮತ್ತು ವೈಯಕ್ತಿಕ ವಿಷಯದಲ್ಲಿ ಸಮಾಜವಾದಿ ಸಮಾಜ ನಿರ್ಮಾಣ ಮಾಡುವುದು ಸಮಾಜವಾದದ ಮುಖ್ಯ ಗುರಿಯಾಗಿರುತ್ತದೆ. ಇದು ಒಂದು ಸೂತ್ರಕ್ಕೆ ಮಾತ್ರ ಬದ್ಧವಾದುದಲ್ಲ. ಸಮಷ್ಠಿಯ ಸುಖವೇ ಇಲ್ಲಿ ಮುಖ್ಯ, ಇದು 'ಪ್ರಜಾರಾಜ್ಯ'ವಾಗಿರುತ್ತದೆ.

"ವ್ಯಕ್ತಿ ಸ್ವಾತಂತ್ರ್ಯ ಹಾಗೂ ಸಮಾಜವಾದಿ ಸಮಾಜ ನಿರ್ಮಾಣಕ್ಕೆ ಸಂಪೂರ್ಣ ಸ್ವರಾಜ್ಯದ ಗುರಿ"[3] ದೀನ ದಲಿತರ ಬಗ್ಗೆ ಸಮಾನ ಮನೋಭಾವ ಹೊಂದುವುದು ಸಾಹಚರ್ಯ ಬೆಳೆಸುವುದು ಅಥವಾ ಅವರೊಂದಿಗೆ ಒಂದಾಗುವುದು, ಅವರ ಜೊತೆ ಭಾವೈಕ್ಯವಾಗುವುದು ಇವೆಲ್ಲ ನನ್ನ ದೃಷ್ಟಿಯಲ್ಲಿ ಸಮಾಜವಾದವೇ. ಇದು ಏಕಮುಖವಾಗಿದೆ ನಿಜ. ಕೇವಲ ಇದನ್ನೇ ಸಮಾಜವಾದವೆಂದು ಬಿಟ್ಟರೆ ಬಹುಶಃ ತಪ್ಪಾಗುತ್ತದೆ. ಆ ಅರ್ಥದಲ್ಲಿ ಭಾರತದ ಸಮಾಜವಾದವು ಕನಿಷ್ಠಪಕ್ಷ ಈ ಆಧುನಿಕ ಕಾಲದಲ್ಲಿ ಗಾಂಧೀಜಿಯವರ ಪ್ರಯತ್ನಗಳಿಂದ ಆರಂಭವಾಗುತ್ತದೆ"[4] ಎಂಬುದು ಲೋಹಿಯಾರವರ ಸಾಮಾಜಿಕ ಚಿಂತನೆಯಾಗಿದೆ. ತಮ್ಮ ಬದುಕಿನುದ್ದಕ್ಕೂ ಸಮಾಜವಾದಿಯಾಗಿಯೇ ಉಳಿದು ಭಾರತದಲ್ಲಿ ಸಮಾಜವಾದಕ್ಕೆ ಜೀವ ತುಂಬಿದ್ದರು. ಆಧುನಿಕ ಕನ್ನಡ ಸಾಹಿತ್ಯದ ಬಂಡಾಯದ ನೆಲೆಯನ್ನು ಗುರುತಿಸುವಾಗ ಲೋಹಿಯಾರವರ ಚಿಂತನೆಗಳು ಬಹುವಾಗಿ ಕಂಡು ಬರುತ್ತದೆ. ಶ್ರೀಕೃಷ್ಣ ಆಲನಹಳ್ಳಿ, ಪಿ. ಲಂಕೇಶ್, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ, ಡಿ. ಎಸ್. ನಾಗಭೂಷಣ, ಯು. ಆರ್. ಅನಂತಮೂರ್ತಿ ಹೀಗೆ ಹತ್ತಾರು ಹೆಸರುಗಳನ್ನು ಗುರುತಿಸಬಹುದು.

'ಭಾರತೀಪುರ' ಕಾದಂಬರಿಯ ನಾಯಕ ಜಗನ್ನಾಥ. ವಿದ್ಯಾವಂತ, ಜಮೀನುದಾರ, ಮೇಲಾಗಿ ವಿದೇಶೀ ಜೀವನಕ್ರಮದ ಪರಿಚಯವೂ ಸಾಕಷ್ಟಿದೆ. ಇನ್ನು ಇಡೀ ಕಥೆ ಜರುಗುವ ಸ್ಥಳ ಭಾರತೀಪುರವೆಂಬ ಊರಿನಲ್ಲಿ. ಭಾರತೀಪುರದ ಚಿತ್ರಣವೂ ವಿಶೇಷವಾಗಿದೆ. ಸುಂದರ ಮಲೆನಾಡಿನ ಪರಿಸರದಲ್ಲಿರುವ ಇತ್ತ ಪಟ್ಟಣವೂ ಅಲ್ಲದ ಅತ್ತ ಹಳ್ಳಿಯೂ ಅಲ್ಲದ ಊರಿನಲ್ಲಿ ಪುರೋಹಿತರು, ವ್ಯಾಪಾರಿಗಳು ಸೇರಿದಂತೆ ಹತ್ತು ಹಲವು ಉದ್ಯೋಗವನ್ನವಲಂಬಿಸಿದ ಕೆಳ ಮತ್ತು ಮೇಲುವರ್ಗದ ಜನರಿದ್ದಾರೆ. ಮಂಜುನಾಥ ದೇವರು ಇಲ್ಲಿಯ ಜನಜೀವನವನ್ನು ಕಾಲದಿಂದಲೂ ನಿಯಂತ್ರಿಸುತ್ತಿರುವ ಒಂದು 'ಶಕ್ತಿ.'

ಇಂತಹ ಸಮಾಜದಲ್ಲಿ ಬಂಡವಾಳಶಾಹಿಯೂ ಸಂಪ್ರದಾಯಸ್ಥ ಕುಟುಂಬದವನೂ ಆದ ಜಗನ್ನಾಥ ಸ್ವತಃ ಅಸ್ಪೃಶ್ಯತೆಯ ನಿವಾರಣೆಗೂ, ಆರ್ಥಿಕ ವಿಮುಕ್ತಿಗೂ ಹೋರಾಡುವ ಮುಂದಾಳಾಗಲು ಬಯಸುತ್ತಾನೆ. ತನ್ನ ಇಂಗ್ಲೆಂಡ್ ವಿದ್ಯಾಭ್ಯಾಸದ ಅವಧಿಯಲ್ಲಿನ ವಿದೇಶಿ ಗೆಳತಿ ಮಾರ್ಗರೆಟ್ಟಳೊಂದಿಗೆ ಈ ವಿಚಾರಗಳನ್ನು ಹಂಚಿಕೊಳ್ಳುತ್ತಾನೆ.

ತಾನು ಉಳಿಯಬೇಕೆಂದು ಬಯಸುವ ಭಾರತೀಪುರದಲ್ಲಿ ಸಮಾಜ ಸುಧಾರಣೆಗೆ ತೊಡಗುವ ಜಗನ್ನಾಥನು ಹಲವು ರೀತಿಯಲ್ಲಿ ಪ್ರಯತ್ನಗಳನ್ನು ಮಾಡುತ್ತಾನೆ.

"ದೇವರನ್ನು ನಾಶಮಾಡದ ಹೊರತು ನಾವು ಖಂಡಿತ ಕ್ರಿಯೇಟಿವ್ ಆಗಲಾರೆವು" ಎಂಬ ಜಗನ್ನಾಥನ ನಿಲುವಿನಿಂದ ಭಾರತೀಪುರತ ಸಮುದಾಯದಲ್ಲಿ ಸ್ವಲ್ಪ ಮಟ್ಟಿಗಾದರೂ ಬದಲಾವಣೆಯನ್ನು ತರಲು ಪ್ರಯತ್ನಿಸುತ್ತಾನೆ. ಆದರೆ ಅವನೇ ಮತ್ತೊಂದು ಸನ್ನಿವೇಶದಲ್ಲಿ ಹೇಳುವಂತೆ ಬದಲಾವಣೆಯನ್ನು ತರಬೇಕು ಎನ್ನುವ ಹಂಬಲ ಮನಃಪೂರ್ವಕವಾದುದಲ್ಲ." ನಾನಿದ್ದೇನೆ ಎಂಬುದನ್ನು ಗುರುತಿಸಿಕೊಳ್ಳಲು ಈ ಬಂಡಾಯ, ಈ ಕ್ರಾಂತಿ, ಈ ಸಾಹಿತ್ಯದ ಒಣಚರ್ಚೆ" ಎಂದುಕೊಳ್ಳುವ ಮಾತುಗಳಲ್ಲಿ ಗಮನಿಸಬಹುದು.

ಜಗನ್ನಾಥ ಒಂದು ರೀತಿಯ ವೈಚಾರಿಕ ದ್ವಂದ್ವದಲ್ಲಿ ಸಿಲುಕಿರುತ್ತಾನೆ. ಅವನ ಪ್ರಗತಿಶೀಲ ವಿಚಾರಗಳಿಗೂ, ಜಡತ್ವವನ್ನೇ ಜೀವನವಾಗಿಸಿಕೊಂಡ ಭಾರತೀಪುರದ ಸಮಾಜಕ್ಕೂ ದೊಡ್ಡ ಅಂತರವೇ ಇರುತ್ತದೆ.

ತನ್ನ ಊರಿನ ಹರಿಜನರಿಗೆ ಅಕ್ಷರಾಭ್ಯಾಸ ಮಾಡಿಸಲು ಪ್ರಯತ್ನಿಸುತ್ತಾನೆ. ಜಗನ್ನಾಥನ ಉದ್ದೇಶ ಅವರನ್ನು ಸಾಕ್ಷರರನ್ನಾಗಿ ಮಾಡುವುದು. ಆದರೆ ಕೆಲವು ಆಯ್ದ ಯುವಕರಿಗೆ ಮಾತ್ರ ಈ ಅವಕಾಶ ದೊರಕುತ್ತದೆ. ಅಕ್ಷರಾಭ್ಯಾಸವಾದರೆ ಅವರ ತಿಳಿವಿನ ಮಟ್ಟ ಏರುತ್ತದೆಂಬುದು ಜಗನ್ನಾಥನ ಆಶಯ. ಆದರೆ ಜಗನ್ನಾಥ ಅವರುಗಳಿಗೆ ಅಕ್ಷರಾಭ್ಯಾಸ ಮಾಡಿಸುವ ಹಂತದಲ್ಲಿ ಒಂದು ಬಾರಿಯೂ ಮುಟ್ಟುವುದಿಲ್ಲ. ಎಂದರೆ ಜಗನ್ನಾಥನೂ ಅಸ್ಪೃಶ್ಯತೆಯನ್ನು ಆಚರಿಸುವವನಾಗಿಯೇ ಇರುತ್ತಾನೆ. ಈ ಅಂಶವನ್ನು ಕಾದಂಬರಿ ಪ್ರಶ್ನಿಸುತ್ತದೆ.

ಜನಪರವಾದ ಸಮಾನತೆಯನ್ನು ಈ ಸನ್ನಿವೇಶವು ಧ್ವನಿಸುತ್ತದೆ.

ಹೊಲೆಯರ ಮಕ್ಕಳನ್ನು ಶಾಲೆಗೆ ಸೇರಿಸುವ ಉದ್ದೇಶ ಕೇವಲ ವಿದ್ಯಾರ್ಜನೆ ಮಾತ್ರವಲ್ಲ ಎಂಬುದು ಜಗನ್ನಾಥನ ಮನಸ್ಸಿನಲ್ಲಿದೆ. ಹಾಗಾಗಿಯೇ ತನ್ನ ಚಿಕ್ಕಿಯ ಜೊತೆ 'ಹಾಗಲ್ಲ ಚಿಕ್ಕಿ. ನಾವು ಉಪಕಾರ ಮಾಡಿದ್ರೆ ಅವರು ಸರಿಹೋಗಲ್ಲ, ನಿಜ. ಅವರು ನಮ್ಮನ್ನು ಧಿಕ್ಕರಿಸಿ ನಿಲ್ಲಬೇಕು. ಆಗ ಅವ್ರಿಗೆ ತಾವೂ ಮನುಷ್ಯರು ಅನ್ನಿಸುತ್ತೆ. ತಾವು ಕೀಳುಜನ ಅನ್ನೋದನ್ನ ಅವೇ ಒಪ್ಪಿಕೊಳ್ಳೋ ಹಾಗೆ ನಾವೂ ಮಾಡಿದೀವಲ್ಲ. ಇದು ಭಯಂಕರ ವಿಷಯ..........'[5] ಎಂದು ತನ್ನ ನಿಲುವನ್ನು ವ್ಯಕ್ತಪಡಿಸುತ್ತಾನೆ.

ಕಾದಂಬರಿಯ ಮತ್ತೊಂದು ಘಟ್ಟದಲ್ಲಿ ವರ್ಗ ತಾರತಮ್ಯದ ನಿರ್ಮೂಲನೆಗಾಗಿ ವಂಶಪಾರಂಪರ್ಯವಾಗಿ ತಮ್ಮ ಕುಟುಂಬದ ಹಿಡಿತದಲ್ಲಿದ್ದ ಜಮೀನುಗಳನ್ನು ಉಳುವವರಿಗೇ ವಹಿಸಿಕೊಟ್ಟು ಅದಕ್ಕೆ ಸಂಬಂಧಿಸಿದ ಪ್ರಾಮಿಸರಿ ನೋಟುಗಳನ್ನು ಹರಿದು ಹಾಕುತ್ತಾನೆ. ಆದರೆ ಆ ಜಮೀನುಗಳ ಹಕ್ಕು ಜಗನ್ನಾಥನದಾಗಿಯೇ ಉಳಿಯುತ್ತದೆ. ಒಂದು ರೀತಿಯಿಂದ ಇದು ತೋರಿಕೆಯ ಸಮಾಜವಾದವಾಗಿರುತ್ತದೆ. ಪ್ರಜ್ಞಾಪೂರ್ವಕವಾಗಿ ಸಮಾನತೆಯನ್ನು ಸಾಧಿಸಲು ಹೊರಟ ಜಗನ್ನಾಥನಿಗೆ ಇಂತಹ ಮಹತ್ವದ ವಿಷಯ ಮರೆವೆಯಾಯಿತೆ ಎಂಬ ಸಂಶಯ ಉಳಿಯುತ್ತದೆ. ಇಲ್ಲಿ ವಿಚಾರದಲ್ಲಿ ಮಾತ್ರ ಬಂಡಾಯ ಉಳಿದು ಆಚಾರದಲ್ಲಿ ಅದು ಇಲ್ಲವಾಗುತ್ತದೆ. ಇಂತದೇ ಅಂಶವನ್ನು ಜಗನ್ನಾಥನ ಧಾರ್ಮಿಕ ನಂಬಿಕೆಗಳ ವಿಷಯದಲ್ಲಿಯೂ ಕಾಣಬಹುದು. ತನ್ನ ಮನೆಯ ಪರಂಪರಾಗತವಾದ ಅವಿಭಾಜ್ಯ ಅಂಗದಂತಿದ್ದ ಸಾಲಿಗ್ರಾಮವನ್ನು ಹೊಲೆಯರಿಂದ ಮುಟ್ಟಿಸಿದರೂ ಅದನ್ನು ಶುದ್ಧಿಗೊಳಿಸಿ ಮತ್ತೆ ಮನೆಯಲ್ಲಿ ಇಟ್ಟುಕೊಳ್ಳುವುದರ ಬಗ್ಗೆ ಜಗನ್ನಾಥನ ಪ್ರತಿರೋಧವಿರುವುದಿಲ್ಲ. ಇಲ್ಲಿ ಎರಡು ಅಂಶಗಳನ್ನು ಗಮನಿಸಬಹುದು. ದೇವರನ್ನು ನಾಶಮಾಡದ ಹೊರತು ಕ್ರಿಯೇಟಿವ್ ಆಗಲು ಸಾಧ್ಯವಿಲ್ಲ ಎಂದುಕೊಳ್ಳುವ ಜಗನ್ನಾಥ ಸಾಲಿಗ್ರಾಮ ಶಿಲೆಯನ್ನು ಹೊಲೆಯರಿಂದ- ಮುಟ್ಟಿಸುವ ಪರಿಣಾಮದಿಂದಾಗಿ ಅದು 'ದೇವರು' ಎಂಬ ಕಲ್ಪನೆಯನ್ನು ಮತ್ತಷ್ಟು ಗಟ್ಟಿಗೊಳಿಸಿದಂತಾಗುತ್ತದೆ. ತಾನಾಗಿಯೇ ಅವರು ಅದನ್ನು ಮುಟ್ಟಲು ಹಿಂಜರಿಯುತ್ತಾರೆ, ಹೆದರುತ್ತಾರೆ. ಎರಡನೆಯದಾಗಿ ಅದನ್ನು ಶುದ್ಧೀಕರಿಸುವ ಬಗ್ಗೆ ಜಗನ್ನಾಥ ಯಾವ ಚಕಾರವನ್ನೂ ಎತ್ತುವುದಿಲ್ಲ. ಅದನ್ನು ಮೌನವಾಗಿ ಸ್ವೀಕರಿಸುತ್ತಾನೆ. ಅದಕ್ಕೆ ಕಾರಣರು ತನ್ನ ಮನೆಯ ಜನ, ನಾನಲ್ಲ ಎನ್ನುವಂತೆ ವರ್ತಿಸುತ್ತಾನೆ. ಈ ರೀತಿಯ ಜಗನ್ನಾಥನ ಕ್ರಾಂತಿಯಿಂದಾಗಿ ಅದನ್ನು ಅರಗಿಸಿಕೊಳ್ಳಲಾರದ ಭಾರತೀಪುರದ ಜನತೆ ಗೊಂದಲಕ್ಕೀಡಾಗುತ್ತದೆ.

ಹಾಗೆಯೇ ಹರಿಜನರ ದೇವಾಲಯ ಪ್ರವೇಶ ಸನ್ನಿವೇಶದಲ್ಲಿ ತಾನೇ ಯುವಕರ ಗುಂಪೊಂದನ್ನು ದೇವಾಲಯ ಪ್ರವೇಶಿಸಲು ಹುರಿದುಂಬಿಸುತ್ತಾನೆ. ಇದರಿಂದ ಏನು ಪ್ರಯೋಜನವಾಗಬಹುದೆಂದು ಬಹುಶಃ ಜಗನ್ನಾಥನ ಅರಿವಿಗೂ ಬರುವುದಿಲ್ಲ. ಬಂಡವಾಳಶಾಹಿ ಮತ್ತು ಪುರೋಹಿತಶಾಹಿ ಶಕ್ತಿಗಳ ಪ್ರತೀಕವಾದ ಭಕ್ತಿಯ ಸಂಕೇತವೂ ಆದ ದೇವಾಲಯವನ್ನೇ ಎಂದೂ ಪ್ರವೇಶಿಸದ ಹರಿಜನರ ಆರ್ಥಿಕ, ಸಾಮಾಜಿಕ

ಸ್ಥಾನಮಾನಗಳು ಇತರ ವರ್ಗಗಳೊಡನೆ ಸಮಾನವಾಗುವ ಸಾಧ್ಯತೆ ಇದೆಯೆ?

ದೇವಾಲಯದ ಶಿವಲಿಂಗವನ್ನೇ ಕಣ್ಮರೆಯಾಗುವಂತೆ ಮಾಡುವ ಜಗನ್ನಾಥ ಸಹಾಯ ಮಾಡಿದ್ದು ಯಾರಿಗೆ? ಅಥವಾ ದೇವರನ್ನು ನಾಶಮಾಡುವ ಕ್ರಮ ಇದೇಯೆ? ಸಮಾಜದಲ್ಲಿ ಎಲ್ಲ ರೀತಿಯ ಸಮಾನತೆಯನ್ನು ಸಾಧಿಸುವ ಉದ್ದೇಶದ ಸಲುವಾಗಿ ಮಾಡಿದ ಇಂತಹ ಪ್ರಯತ್ನ ಮತ್ತೊಂದು ರೀತಿಯಲ್ಲಿ ಜನಮನದಲ್ಲಿ ಗಟ್ಟಿಯಾಗಿ ದೇವರು ಬೆಳೆಯುವಂತೆ ಪ್ರೇರೇಪಿಸುತ್ತದೆ. ಮಂಜುನಾಥನ ಮಹಿಮೆ ಮತ್ತಷ್ಟು ವರ್ಧಿಸುತ್ತದೆ.

ಹೊಲೆಯರ ಯುವಕರು ದೇವಾಲಯ ಪ್ರವೇಶಿದ ಕಾರಣದಿಂದ ದೇವರೇ ಗುಡಿಯಿಂದ ಹೊರಹೋದನೆಂಬ ಭಾವನೆ ಜನರಲ್ಲಿ ಮೂಡುತ್ತದೆ. ಜಗನ್ನಾಥನ ಆಲೋಚನೆಯಲ್ಲಿರುವ ಜಾತಿ ವಿನಾಶ, ಕ್ರಿಯಾಶೀಲ ಸಮಾಜ, ಸಮಾಜವಾದಿ ಸಮಾಜ, ಬಂಡವಾಳಶಾಹಿ, ಜಮೀನುದಾರಿ ಪದ್ಧತಿಗಳ ವಿರೋಧ ಇವೆಲ್ಲವನ್ನೂ ಕಾರ್ಯಗತಗೊಳಿಸಲು ಅವನು ಹೇಳಿದಂತೆ ನಡೆದುಕೊಳ್ಳುವ ಒಂದು ಸಮಾಜ ಅವನಿಗೆ ಬೇಕಾಗುತ್ತದೆ. ಆದರೆ ಇವನ ಆಲೋಚನೆಯ ವೇಗಕ್ಕೆ ಆ ಸಮಾಜ ಹೊಂದಿಕೊಳ್ಳಲು ಮುನ್ನಡೆಯಲು ಪ್ರತಿರೋಧ ವ್ಯಕ್ತ ಪಡಿಸುತ್ತದೆ. ಹಾಗೆ ಜಗನ್ನಾಥನು ಹಲವಾರು ಬಾರಿ ಯೋಚಿಸಿ ಪ್ರಯತ್ನಿಸಿದರೂ ಅವನ ಯಾವುದೆ ಜನಪರ ಕೆಲಸಗಳೂ ಸಫಲವಾಗುವುದಿಲ್ಲ.

ದೇಶದ ಪ್ರಮುಖ ನಗರಗಳಲ್ಲಿರುವಂತೆ ಹಲವು ಸವಲತ್ತುಗಳನ್ನು ತನ್ನ ಊರಿಗೂ ತಲುಪುವಂತೆ ಮಾಡಲು ಪ್ರಯತ್ನಿಸುತ್ತಾನೆ. ಎಲೆಕ್ಟ್ರಿಸಿಟಿಗಾಗಿ, ರೈಲುಮಾರ್ಗಕ್ಕಾಗಿ, ದೊಡ್ಡ ಕೈಗಾರಿಕೆಗಳಿಗಾಗಿ ಹೀಗೆ ಹಲವು ಆಧುನಿಕ ಸಂಪರ್ಕ ಮಾಧ್ಯಮಗಳನ್ನು ಊರಿಗೆ ತರಲು ಪ್ರಯತ್ನಿಸುತ್ತಾನೆ. ತನ್ನ ಊರಿನ ತೋಟಗಳಲ್ಲಿ ಬೆಳೆಯುವ ಫಲವತ್ತಾದ ಅಡಿಕೆಗಳಿಗಿಂತ ಆ ಭೂಮಿಯಲ್ಲಿ ದೊರಕುವ ತಾಮ್ರದ ಗಣಿಯ ಮೇಲೆ ಅವನ ಕಣ್ಣು ಬೀಳುತ್ತದೆ. ಅದರಿಂದ ಆರ್ಥಿಕಾಭಿವೃದ್ಧಿ ಸಾಧ್ಯ ಎಂದು ಕೊಳ್ಳುತ್ತಾನೆ. ಎಲ್ಲರ ಹಿತಾಸಕ್ತಿಯನ್ನು ಬಯಸಬೇಕಾದ ಸಮಾಜವಾದಿ ಚಿಂತಕನು ಇಂತಹ ದೊಡ್ಡ ಯೋಜನೆಗಳ ಮೂಲಕ ತನಗೇ ತಿಳಿಯದಂತೆ ಜನವಿರೋಧಿಯಾಗುತ್ತಾನೆ. ನೈತಿಕವಾಗಿ ಸಮಾಜವನ್ನು ಮೇಲೆತ್ತುವ ಕೆಲಸ ಅವನಿಂದ ಸಾಧ್ಯವಾಗುವುದಿಲ್ಲ. ತಮ್ಮ ಊಟದ ಮನೆಯಲ್ಲಿ ಒಬ್ಬ ಲಿಂಗಾಯಿತ, ಒಬ್ಬ ಒಕ್ಕಲಿಗ ಊಟ ಮಾಡುವುದೇ ಜಗನ್ನಾತನಿಗೆ ಸಮಾಜವಾದವೆನಿಸುತ್ತದೆ. ಅದನ್ನು ವಿಸ್ತರಿಸಿ ಕೊಳ್ಳುವಲ್ಲಿ ಅವನ ಪ್ರಯತ್ನಗಳು ಫಲಕಾರಿಯಾಗುವುದಿಲ್ಲ.

ಜಾತಿವಾದ, ವರ್ಗ ಸಂಘರ್ಷವನ್ನು ಜಗನ್ನಾಥ ರಾಜಕೀಯ, ನೀತಿಯಿಂದ ಪರಿಹರಿಸಲು ಹವಣಿಸುತ್ತಾನೆ. ತನ್ನ ಸುತ್ತಲಿನ ಸಮಾಜದಲ್ಲಿ ಕ್ರಾಂತಿಕಾರಿ ಬದಲಾವಣೆಯನ್ನು ತರಲು ಹೊರಟ ಜಗನ್ನಾಥ ತನ್ನ ವ್ಯಕ್ತಿತ್ವಕ್ಕೇ ಒಂದು ರೂಪ ಕೊಟ್ಟುಕೊಳ್ಳುತ್ತಾನೆ. ಇದನ್ನು ಗಮನಿಸಿದರೆ ನವ್ಯದ ವ್ಯಕ್ತಿನಿಷ್ಠತೆಯೇ ಬಂಡಾಯಕ್ಕಿಂತ ಫಲಕಾರಿಯಾಗಿದೆ. ಎಂದರೆ ತಾನು ಜಾತಿವಾದದಿಂದ ಹೊರಬಂದರೂ ತನ್ನ ಊರಿನ ಜನರನ್ನು ಅದರಿಂದ ಹೊರತರುವ ಆಂತರಿಕ ಶಕ್ತಿ ಅವನಲ್ಲಿ ಇರುವುದಿಲ್ಲ. ಜಗನ್ನಾಥ ವೈಚಾರಿಕ ಶಕ್ತಿಯಾಗಿ ಉಳಿಯುತ್ತಾನೆ.

ಅವನು ಜೋಯಿಸರೊಂದಿಗೆ ಆಡುವ ಮಾತುಗಳು, ಹರಿಜನ ಕೇರಿಗೆ ಹೋಗುವ ಪ್ರಸಂಗಗಳು ಅವರುಗಳ ಮೇಲೆ ಯಾವುದೇ ಪರಿಣಾಮವನ್ನು ಬೀರುವುದಿಲ್ಲ.

'ಭಾರತೀಪುರ'ದ ನಾಯಕ ಜಗನ್ನಾಥನ ಪಾತ್ರದ ಮೂಲಕ ನೋಡಿದಾಗ ಅವನು ಸಮಾಜವಾದ, ಅದಕ್ಕಾಗಿ ಮಾಡಿದ ಚಿಂತನೆ, ಪ್ರಯತ್ನಗಳು ವಿಫಲವಾಗಿರುವುದನ್ನು ಕಂಡರೂ ಇತರರ ದೃಷ್ಟಿಯಿಂದ ಪ್ರಗತಿಯನ್ನು ಕಾಣಬಹುದು.

ಲೋಹಿಯಾರ ಅಪ್ಪಟ ಸಮಾಜವಾದವನ್ನು ಅಪ್ರಜ್ಞಪೂರ್ವಕವಾಗಿ ತಮ್ಮ ಜೀವನದಲ್ಲಿ ಭಾರತೀಪುರದ ಸಮಾಜ ಅಳವಡಿಸಿಕೊಳ್ಳುತ್ತಿರುತ್ತದೆ. ಜಗನ್ನಾಥ ಆದರ್ಶದ ಬೆನ್ನು ಹತ್ತಿದರೆ ಹುಟ್ಟಿನಿಂದ ಅದೇ ಪರಿಸರಕ್ಕೆ ಅಂಟಿಕೊಂಡ ಬಡಜನತೆ ಸಮಾನತೆಗಾಗಿ ಶ್ರಮಿಸುತ್ತದೆ. ಅವರು ಬಯಸುವ ಬದಲಾವಣೆಯು ತಕ್ಷಣದಲ್ಲ. ಹಂತ ಹಂತವಾಗಿ ಬದಲಾಗಲು, ಸಮಾನರಾಗಲು ಬಯಸುತ್ತಾನೆ. ಜಗನ್ನಾಥ ಯುವಕರಿಗೆ ಕೊಟ್ಟ ಹೊಸಬಟ್ಟೆಯನ್ನು ಹರಿದು ಮನೆಮಂದಿಯೆಲ್ಲ ಉಟ್ಟುಕೊಳ್ಳುವಲ್ಲಿ ಇರುವ ಪ್ರೀತಿ, ಸಮಾನತೆಯ ಲಕ್ಷಣ ಜಗನ್ನಾತನ ವಿಚಾರಗಳ ಮುಂದೆ ದೊಡ್ಡದೆನಿಸುತ್ತದೆ.

"ಭಾರತೀಪುರವನ್ನು ಪ್ರಜ್ಞಾಪೂರ್ವಕ ವಿಚಾರವಾದಿ ನಿಲುವಿನಲ್ಲಿ ಬರೆಯಲು ನಿಶ್ಚಯಿಸಿ ಹೊರಟಿದ್ದೆ"[6] ಎಂದು ಸ್ವತಃ ಅನಂತಮೂರ್ತಿಯವರೆ ಹೇಳಿಕೊಂಡಿದ್ದಾರೆ. ಆ ವಿಚಾರವಾದಿ ನಿಲುವುಗಳು ಎಲ್ಲಿಂದ ಬಂದದ್ದು, ಸ್ಥೂಲವಾಗಿ ಗಮನಿಸಿದರೆ ಒಂದು ' ಪಾಶ್ಚಾತ್ಯ ಸಾಹಿತ್ಯವಾದಗಳು' ಮತ್ತು 'ಭಾರತೀಯ ಸಮಾಜವಾದ' ಅವರ ವಿಚಾರ ಶಕ್ತಿಯ ಮೂಲವಾಗಿದೆ ಎಂದು ಗುರುತಿಸಿ ಕೊಳ್ಳಬಹುದು. ಇಲ್ಲಿನ ವಿಚಾರವಾದವು ಸಮಾಜವೊಂದು ನಿರ್ಮಿಸಿಕೊಂಡ ಸಾಮಾಜಿಕ ಸಂಸ್ಥೆಯಾದ ರಾಜಕೀಯ"ಅಥವಾ ಪ್ರಜಾಪ್ರಭುತ್ವದಲ್ಲಿ ಸಮಾಜವಾದವನ್ನು ಕಾಣಲು ಹಂಬಲಿಸುತ್ತದೆ.

ಒಂದು ದೃಷ್ಟಿಯಿಂದ ಕಾದಂಬರಿಯ ನಾಯಕ ಜಗನ್ನಾಥ ಸಮಾಜವಾದವನ್ನು ವೈಚಾರಿಕವಾಗಿ ಒಪ್ಪಿಕೊಂಡಿದ್ದರೂ ಅದನ್ನು ಕಾರ್ಯರೂಪಕ್ಕೆ ಇಳಿಸುವಲ್ಲಿ ಇರಬೇಕಾದ ಒತ್ತಡ ಅವನಲ್ಲಿ ಇರುವುದಿಲ್ಲ.

ಅದೇ ಸಮಾಜದ ಪ್ರಮುಖ ಭಾಗವಾದ ಹಿಂದುಳಿದ ವರ್ಗವೊಂದು ಜಗನ್ನಾಥನ ವಿಚಾರಗಳನ್ನು ಸಂಶಯದಿಂದ ನೋಡುತ್ತದೆ. ಸಾಲಿಗ್ರಾಮವನ್ನು ಮುಟ್ಟಲು ಹಿಂಜರಿಯುವ ಗುಂಪು, ತಮ್ಮ ಕೇರಿಗೆ ಜಗನ್ನಾಥ ಬಂದಾಗಲೂ ಅವರ ಗುಡಿಯೊಳಗೆ ಬರುವುದನ್ನು ಅಪೇಕ್ಷಿಸುವುದಿಲ್ಲ. ಎಂದರೆ ಅವರದೇ ಆದ ನಂಬಿಕೆಗಳನ್ನು ಉಳಿಸಿಕೊಳ್ಳುವುದು ಒಂದು ಬಗೆಯಾದರೆ, ಜಗನ್ನಾಥ ಅವರ ಗುಡಿಯೊಳಗೆ ನುಗ್ಗುವುದರಿಂದ ಅವರ ಜೀವನದಲ್ಲಿ ಯಾವುದೆ ಬದಲಾವಣೆ ಸಾಧ್ಯವಿಲ್ಲ ಎಂಬುದನ್ನು ಕಾದಂಬರಿ ಧ್ವನಿಸುತ್ತದೆ.

ಸಾಲಿಗ್ರಾಮವನ್ನು ಹೊಲೆಯರು ಮುಟ್ಟುವುದರಿಂದಲೂ ಅವರು ಇವನ ಮನೆಗೆ ಬಂದು ಊಟ ಮಾಡುವುದರಿಂದಲೂ, ಜಗನ್ನಾಥ ಅವರ ಗುಡಿಸಲುಗಳಿಗೆ ನುಗ್ಗುವುದರಿಂದಲೂ ಕ್ರಾಂತಿಯಾಗುತ್ತದೆಂಬ ನಂಬಿಕೆ ಜಗನ್ನಾಥನದು. ಆದರೆ ಅಂತಹ ಯಾವ ಬದಲಾವಣೆಯೂ ಅಲ್ಲಿ ಆಗುವುದಿಲ್ಲ.

ಕಾದಂಬರಿಯ ಮೊದಲಿಗೇ ಬರುವ ಪ್ರಖ್ಯಾತ ಪಂಚಾಂಗದ ಕರ್ತೃಗಳಾದ ನಾಗರಾಜ ಜೋಯಿಸರು ಆಸ್ತಿಕರೊಡನೆ ಆಸ್ತಿಕರಂತೆಯೂ, ನಾಸ್ತಿಕರೊಡನೆ ನಾಸ್ತಿಕರಂತೆಯೂ ವರ್ತಿಸುತ್ತಾರೆ. ತಮ್ಮ ಮಗ ಲಾಯರ್ ಆಗಿರುವ ಕಾರಣದಿಂದ ಭೂತರಾಯನ ನ್ಯಾಯ ತೀರ್ಮಾನದಿಂದ ಯಾವುದೆ ವ್ಯಾಜ್ಯವು ಇವರ ಲಾಯರ್ ಮಗನಿಗೆ ಸಿಕ್ಕುತ್ತಿಲ್ಲ ಎಂಬ ವ್ಯಾವಹಾರಿಕತೆ ಇರುವಂತೆಯೇ ಮಂಜುನಾಥನ ಸನ್ನಿಧಿಗೆ ಬರುವ ಯಾತ್ರಿಕರನ್ನು ಆಕರ್ಷಿಸುವ ನಡೆ ನುಡಿಗಳೂ ಅವರಲ್ಲಿದೆ. ಮಂಜುನಾಥನ ವಿಗ್ರಹ ಅದರ ಪ್ರಾಚೀನತೆಯ ಮಾತು ಬಂದಾಗಲೂ ನಾಸ್ತಿಕನಂತೆ ನಡೆದುಕೊಳ್ಳುವುದು ವ್ಯಾವಹಾರಿಕ ಬುದ್ಧಿಯಿಂದ.

ಮುಂದುವರಿದು ಭೂತರಾಯ-ಮಂಜುನಾಥನ ನಡುವಿನ ಸಂಬಂಧವನ್ನು ವಿವರಿಸುವ ರೀತಿಯಲ್ಲಿ ತಮ್ಮ ಮನೆತನಕ್ಕೆ ತಪ್ಪಿಹೋದ ಪೌರೋಹಿತ್ಯದಿಂದಾಗಿ ಜೋಯಿಸರಿಗೆ ನೋವಿದೆ, ಅಸೂಯೆ ಇದೆ. ಆದರೆ ಅದೇ ಸಂದರ್ಭದಲ್ಲಿ ಆಳುವ ಆಳಿಸಿಕೊಳ್ಳುವ ವರ್ಗಗಳು ಹೇಗೆ ರಚನೆಯಾಗಿದೆ. ಮತ್ತು ಅದರ ಪರಿಣಾಮವೇನು ಎಂಬುದನ್ನು ಜೋಯಿಸರ ಮಾತಿನಲ್ಲಿ ಗಮನಿಸಬಹುದು.

"ಆ ಪ್ರದೇಶದ ಮೂಲ ನಿವಾಸಿಗಳಿದ್ದಾರಲ್ಲಾ ಮಂಡೀ ಮೇಲೆ ಪಂಚೆಯುಡೋ ಜನ, ಕುರಿಕೋಳಿ ಕೊಯ್ದು ತಿನ್ನೋ ಜನ ಅವರ ದೇವರು ಈ ಭೂತರಾಯ. ಬ್ರಾಹ್ಮಣ ಯತಿಗಳು ಈ ಭೂತರಾಯನ ಮೇಲೆ ಮಂಜುನಾಥನನ್ನು ಸ್ಥಾಪಿಸಿ ಈ ಪ್ರಾಂತದ ಮೂಲನಿವಾಸಿಗಳು ನಮಗೆ ನಡೆದುಕೊಳ್ಳೋ ಹಾಗೆ ಮಾಡಿದ್ರು."[7] ಈ ಸಾಲುಗಳನ್ನು ಗಮನಿಸಿದರೆ ಮೂಲನಿವಾಸಿಗಳ ಸಂಪ್ರದಾಯ, ಆಚರಣೆಗಳ ಮೇಲೆ ಮತ್ತೊಂದು ಕಡೆಯಿಂದ ಬಂದ ಜನ ತಮ್ಮ ಆಚರಣೆ ಸಂಪ್ರದಾಯಗಳನ್ನು ಹೇರಿರುವುದನ್ನು ಕಾಣಬಹುದು. ಇಲ್ಲಿ ಕೇವಲ ಜನರ ಸಾಮಾಜಿಕ ಜೀವನವಷ್ಟೇ ಅಲ್ಲ, ಅವರ ಧಾರ್ಮಿಕ ವಿಚಾರದಲ್ಲಿಯೂ ತಲೆಹಾಕಿ ದಬ್ಬಾಳಿಕೆ ನಡೆಸಿರುವುದನ್ನು ಗಮನಿಸಬಹುದು.

ಜೋಯಿಸರ ಮಾತಿಗೆ ಪ್ರತಿಯಾಗಿ "ಅದಕ್ಕೇ ಹಾಗಾದರೆ ಭೂತರಾಯ ಈಗ ಗೇಣಿದಾರರ ವಿರುದ್ಧಾನೇ ಎಲ್ಲಾ ತೀರ್ಪನ್ನೂ ಕೊಡೋದು ಅನ್ನಿ"[8] ಎಂದು ಕೊಂಕು ಮಾತನ್ನಾಡುತ್ತಾನೆ. ಎಂದರೆ ತುಳಿತಕ್ಕೊಳಗಾದ ಗುಂಪು ತನ್ನ ಪ್ರತಿರೋಧವನ್ನು ಮತ್ತೊಂದು ರೀತಿಯಿಂದ ವ್ಯಕ್ತಪಡಿಸುತ್ತಿದೆ ಎಂಬುದು ಇಲ್ಲಿ ಬಂಡಾಯದ ಅಂಶವಾಗಿದೆ.

ಒಂದು ಕಾಲಘಟ್ಟದಲ್ಲಿ ಜಾರಿಗೆ ಬಂದು, ನಡೆದುಕೊಂಡು ಹೋಗುತ್ತಿರುವ ಸಾಂಸ್ಕೃತಿಕ

ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಜಗನ್ನಾತನ ಮಾತಿನಲ್ಲಿ ಕಾಣುತ್ತದೆ. ಮಂಜುನಾಥನಿಗೆ ಅಧೀನನಾದ ಭೂತರಾಯ ಪ್ರಸ್ತುತ ಸಮಾಜದಲ್ಲಿ ಗೇಣಿದಾರರ ವಿರುದ್ಧವೇ ತೀರ್ಪು ನೀಡುತ್ತಾನೆ. ಈಗ ಧರ್ಮ, ಸಂಪ್ರದಾಯ ಎಂಬ ಅದೇ ಹಳೆಯ ಅಸ್ತ್ರವನ್ನೇ ದಬ್ಬಾಳಿಕೆ ನಡೆಸಿದ ವರ್ಗಗಳ ವಿರುದ್ಧ ಬಳಸಲಾಗಿದೆ. ಆಳುವ ವರ್ಗವಾದ ಪುರೋಹಿತಶಾಹಿ ಹಾಗೂ ಬಂಡವಾಳಶಾಹಿಗಳು ಮಂಜುನಾಥನನ್ನು ತಮ್ಮ ಪ್ರತೀಕವೆಂದು ಇಟ್ಟುಕೊಂಡರೆ ಅವರು ಮಾಡಿದ ನಿಯಮದ ಮೂಲಕವೇ ಭೂತರಾಯನನ್ನು ಹೊತ್ತ ವರ್ಗದ (ದಬ್ಬಾಳಿಕೆಗೆ ಒಳಗಾದ) ಜನ ತಿರುಗೇಟು ನೀಡುತ್ತಿದ್ದಾರೆ. ಇಲ್ಲಿ ಧಾರ್ಮಿಕವಾದ ಆಯಾಮದ ಜೊತೆಗೆ ದಬ್ಬಾಳಿಕೆಯ ವಿರೋಧಿ ನೀತಿಯೂ ಇರುವುದನ್ನು ಮನಗಾಣಬಹುದು. ತಮ್ಮನ್ನು ಆಳುವ, ಹಿಡಿತದಲ್ಲಿಟ್ಟ ಗುಂಪನ್ನು ನೇರವಾಗಿ ಎದುರಿಸಲಾರದೆ ಇಂತಹ ಮಾರ್ಗವನ್ನು ಹುಡುಕಿಕೊಂಡಿರುವುದೆಂದು ಭಾವಿಸಬಹುದು. ಜಗನ್ನಾಥನದು ವೈಚಾರಿಕ ಬಂಡಾಯವಾದರೆ ಭೂತರಾಯನನ್ನು ನಂಬಿದ (ಹೊತ್ತ) ಮಂದಿಯದ್ದು ದಬ್ಬಾಳಿಕೆಯಿಂದ ಮುಕ್ತರಾಗುವ ಹಂತದಲ್ಲಿ ಮಾಡಿದ ಪ್ರಯತ್ನ.

ಮತ್ತೊಂದು ಸನ್ನಿವೇಶದಲ್ಲಿ "...........ಮಂಜುನಾಥ ಆಳುವುದು ಏನನ್ನ ಇವರ ಅಜ್ಞಾನವನ್ನ" [9] ಈ ಭಾಗದಲ್ಲಿ ಜಗನ್ನಾಥನ ಆಲೋಚನೆಯಲ್ಲಿ ಜನಪರವಾದ ಒಂದು ದೃಷ್ಟಿಕೋನವಿರುವುದನ್ನು ಕಾಣಬಹುದು.

'ಆಳಿಸಿಕೊಳ್ಳುವುದು'ಎಂಬುದು ಗುಲಾಮಗಿರಿಯ ಸಂಕೇತವಾಗಿ ಕಂಡುಬರುವಂತೆಯೇ. ಮುಂದಿನ ಸಾಲುಗಳಲ್ಲಿ ಬರುವ ಪುರೋಹಿತಶಾಹಿ ಮತ್ತು ಬಂಡವಾಳಶಾಹಿ ಪದ್ಧತಿಗಳು ಭಾರತೀಪುರದಲ್ಲಿ ಬೇರೂರಿವುದನ್ನು ಅದರ ಪ್ರತೀಕವಾಗಿ 'ಮಂಜುನಾಥ'ನನ್ನು ಮಾರ್ಪಡಿಸಿರುವುದನ್ನು ಕಾಣಬಹುದು. ಸಮಾನತೆಯನ್ನು ಸಾರಬೇಕಾಗಿದ್ದ ಮಂಜುನಾಥ ಅಥವಾ ಧರ್ಮವೊಂದು ತಾರತಮ್ಯವನ್ನು ಹುಟ್ಟುಹಾಕುವಂತೆ ಆದಾಗ ಅದನ್ನು ಪರಿಷ್ಕರಿಸುವ ಕೆಲಸವನ್ನು ಹಲವು ಮಾರ್ಗಗಳ ಮೂಲಕ ಕೈಗೊಳ್ಳಲಾಗುತ್ತದೆ. ಜಗನ್ನಾತನ ವೈಚಾರಿಕತೆ, ಭಾರತೀಪುರದ ಇತರ ವರ್ಗಗಳ ಹೋರಾಟ ಇವುಗಳು ಒಂದು ಮಟ್ಟದ ಯಶಸ್ಸನ್ನು ತಂದುಕೊಟ್ಟಿದೆ.

### ಭಾರತೀಪುರ - ಪ್ರಜಾಪ್ರಭುತ್ವ

ಪ್ರಜಾಪ್ರಭುತ್ವ ಭಾರತೀಪುರ ಕಾದಂಬರಿಯಲ್ಲಿ ಕಂಡುಬಂದರೂ ಅದು ಬಂಡಾಯದ ಅಂಶವೆಂದು ಹೇಳುವುದು ಕಷ್ಟವಾಗುತ್ತದೆ. ಸಮಾಜದಲ್ಲಿ ಹರಿಜನರಿಗೆ ಸರಿಯಾದ ಸ್ಥಾನಮಾನಗಳು ದೊರಕದೇ ಹೋದರೂ ಸರ್ಕಾರದ ನೀತಿಗಳಿಂದ ಅವರೂ ಡಿ.ಸಿ.ಯಂತಹ ಪ್ರಮುಖ ಹುದ್ದೆಯನ್ನು ಅಲಂಕರಿಸಿದ್ದಾರೆ. ಕಾದಂಬರಿಯಲ್ಲಿ ಬರುವ ಡಿ.ಸಿ. ಸತ್ಯಪ್ರಕಾಶ್ ಇದಕ್ಕೊಂದು ಉದಾಹರಣೆ. ಅವನ ಎದುರಿಗೆ ಜಗನ್ನಾಥ ಮಾತನಾಡುವಾಗ, ಜಗನ್ನಾಥನಿಗೇ ಸತ್ಯಪ್ರಕಾಶನ ನಡವಳಿಕೆಗಳ ಬಗ್ಗೆ ಅನುಮಾನವಿರುವುದನ್ನು ಕಾಣಬಹುದು.

"ಮನೆಯಿಂದ ಕಾಫಿ ತರಿಸುತ್ತಾರೆ ತಾನು ಕುಡಿಯುತಏನೋ ಪರೀಕ್ಷಿಸಲು. ಜಿದ್ದಿಗಾಗಿ ಬ್ರಾಹ್ಮಣನನ್ನು ಪ್ಯೂನ್ ಮಾಡಿಕೋತಾರೆ.ಆದರೆ ಬಹುವಚನದಲ್ಲಿ ಅವನನ್ನ ಮಾತಾಡಿಸ್ತಾರೆ. ದೈನ್ಯದಿಂದ ಕುದೀತಿದಾರೆ. ನಾನು ವಿದ್ಯಾವಂತ ಬ್ರಾಹ್ಮಣನೆಂದು ನನ್ನನ್ನು ಮೆಚ್ಚಿಸಲು ತಮ್ಮ ಸರ್ವಶಕ್ತಿಯನ್ನು ಉಪಯೋಗಿಸುತ್ತಿದ್ದಾರೆ. ಪಿಳ್ಳೈ ಮುಂದೆ ಈ ಸತ್ಯಪ್ರಕಾಶ್ ಆದಾನು. ಚಲನೆಗೆ ಕೈ ಹಚ್ಚಿದವ ಇದಕ್ಕೂ ಸಿದ್ಧನಾಗಬೇಕು" ಎಂದುಕೊಳ್ಳುತ್ತಾನೆ. ಈ ಸಾಲುಗಳು ಜಗನ್ನಾತನ ಅನಿಸಿಕೆಯೇ ಹೊರತು ಅಂತಹ ಮನೋಭಾವ ಸತ್ಯಪ್ರಕಾಶ್‌ಗೆ ಇರುವುದು ಕಾದಂಬರಿಯಲ್ಲಿ ವ್ಯಕ್ತವಾಗುವುದಿಲ್ಲ.[10]

ಜಗನ್ನಾಥ ಸಮಾನತೆಗಾಗಿ ಎಷ್ಟೇ ಪ್ರಯತ್ನಿಸಿದರೂ ಹರಿಜನನಾದ ಡಿ.ಸಿ.ಯನ್ನು ಸ್ವೀಕರಿಸುವುದಕ್ಕೆ ಹಿಂಜರಿಯುತ್ತಾನೆ. ಅವನಲ್ಲಿ ಹುಳುಕುಗಳನ್ನು ಹುಡುಕಲು ಪ್ರಯತ್ನಿಸುತ್ತಾನೆ.

ಅಂತೆಯೇ ಡಿ.ಸಿ.ಯಂತಹ ಉನ್ನತ ಹುದ್ದೆಯಲ್ಲಿದ್ದು, ಸರ್ಕಾರಿ ಅಧಿಕಾರಿಯಾಗಿದ್ದು, ಎಲ್ಲ ರೀತಿಯ ರಕ್ಷಣೆಯ ಕಾನೂನಿನ ರಕ್ಷಣೆಗಳಿದ್ದೂ ಭಾರತೀಪುರದಲ್ಲಿ ಹರಿಜನರು ಜಾತ್ರೆಯ ದಿನದಂದು ದೇವಾಲಯವನ್ನು ಪ್ರವೇಶಿಸುವುದನ್ನು ಬೇಡವೆನ್ನುತ್ತಾನೆ. ಪ್ರಜಾಪ್ರಭುತ್ವದ ನೀತಿ ನಿಯಮಗಳನ್ನು ತಿಳಿದ ಸತ್ಯಪ್ರಕಾಶ್ ಹಿಗೆ ಹಿಂಜರಿಯುವುದು ವಿಪರ್ಯಾಸ. ಕಾನೂನಿನ ನಿಯಮಗಳನ್ನು ಬಳಸಿಕೊಳ್ಳುವುದು, ಇತರರಂತೆ ಹರಿಜನರೂ ದೇವಾಲಯವನ್ನು ಪ್ರವೇಶಿಸುವಂತೆ ಮಾಡುವುದು ಅವನಿಗೆ ಸಾಧ್ಯವಾಗುವುದಿಲ್ಲ. ಕಾನೂನು ಇಲ್ಲಿ ದುರ್ಬಲವಾಗಿರುವಂತೆ ಸಂದೇಹ ವ್ಯಕ್ತವಾಗುತ್ತದೆ. ಅದು ಅಧಿಕಾರವನ್ನು ನೀಡಬಲ್ಲುದೇ ಹೊರತು ಸಾಮಾಜಿಕ ಸಮಾನತೆಯನ್ನು ನೀಡುವಲ್ಲಿ ವಿಫಲವಾಗುತ್ತದೆ. ಆ ಮೂಲಕ ಪ್ರಜಾಪ್ರಭುತ್ವವು ಇಲ್ಲಿ ದುರ್ಬಲವಾಗಿರುವುದೆಂದು ಹೇಳಬಹುದು.

ಇದೇ ವೇಳೆಗೆ ಭಾರತೀಪುರದ ಯುವ ಹರಿಜನ ಸಮೂಹ ದೇವಾಲಯ ಪ್ರವೇಶ ವಿದ್ಯಾಭ್ಯಾಸ ಇಂತಹ ಜಗನ್ನಾತನ ವಿಚಾರಗಳಿಂದ ಪ್ರಭಾವಿತವಾಗಿ ಸಮಾನತೆಯನ್ನು ಪಡೆಯಲು ಪ್ರಯತ್ನಿಸುತ್ತಾರೆ.

ಮುಂದೆ ಮೈಸೂರು ಸೋಷಿಯಲಿಸ್ಟ್ ಪಕ್ಷದ ನೀಲಕಂಠಸ್ವಾಮಿ, ಮತ್ತು ರಂಗರಾವ್ ಜಗನ್ನಾಥನನ್ನು ಪಾರ್ಟಿ ಅಧ್ಯಕ್ಷನನ್ನಾಗಿ ಮಾಡಲು ಹೊರಟಾಗ ಅವರಿಬ್ಬರ ನಡುವೆಯೇ ಒಮ್ಮತವಿರುವುದಿಲ್ಲ. ಅವನನ್ನು ಅಧ್ಯಕ್ಷನನ್ನಾಗಿ ಆರಿಸುವುದು ಅವನು ರಾಜಕೀಯ ವ್ಯವಸ್ಥೆಗೆ ಸೂಕ್ತ ನಾಯಕ ಎಂದಲ್ಲ. 'ಮುಂದೆ ಪಾರ್ಟಿಗೆ ಒಳ್ಳೆ ಕ್ಯಾಂಡಿಡೇಟ್ ಆಗ್ತಾನೆ ಅಂತ.' ಇಲ್ಲಿಯೂ ಜಗನ್ನಾಥನ ದೃಷ್ಟಿಯಿಂದ ಪ್ರಜಾಪ್ರಭುತ್ವ ಬಂಡಾಯವೆಂದು ಕಂಡು ಬಂದರೆ ಮತ್ತು ನೀಲಕಂಠಸ್ವಾಮಿಯ ದೃಷ್ಟಿಯಿಂದ ಪ್ರಜಾಪ್ರಭುತ್ವದ ಬಂಡಾಯ ತಪ್ಪುದಾರಿಗೆ ಹೋಗುವುದನ್ನು ಗುರುತಿಸಬಹುದು.

## ಅವಸ್ಥೆ

### ಅವಸ್ಥೆ - ಲೋಹಿಯಾ

ಮೊದಲೆರಡು ಕಾದಂಬರಿಗೆ ಹೋಲಿಸಿದರೆ 'ಅವಸ್ಥೆ'ಯಲ್ಲಿ ಬಂಡಾಯದ ಅಂಶಗಳು ಹೇರಳವಾಗಿಯೂ, ಸಮಾನತೆಯನ್ನು ಸಾಧಿಸಲು ನಡೆಸುವ ಪ್ರಯತ್ನಗಳು ಪ್ರಾಮಾಣಿಕವಾಗಿಯೂ ಫಲಕಾರಿಯಾಗಿಯೂ ಇರುವುದನ್ನು ಕಾಣಬಹುದು. ಆಧುನಿಕ ನಾಗರೀಕತೆಗೆ ಪರ್ಯಾಯವಾದ ದೇಶೀಮೂಲದ ಸಮಾಜ ಪದ್ಧತಿಯನ್ನು ಕಾದಂಬರಿಯ ನಾಯಕ ಅನುಸರಿಸುತ್ತಾನೆ. ಈ ಕಾದಂಬರಿಯಲ್ಲಿ ಒಂದೆಡೆ ಗಾಂಧೀವಾದವೂ ಮತ್ತೊಂದೆಡೆ ಲೋಹಿಯಾರವರ ಸಾಮಾಜಿಕ ಚಿಂತನೆಗಳೂ ಮಿಳಿತಗೊಂಡು ಕೃಷ್ಣಪ್ಪ ಕಾದಂಬರಿಯ ಕೊನೆಗೆ ಗೆಲ್ಲುತ್ತಾನೆ.

ಕಾದಂಬರಿಯ ನಾಯಕನಾದ ಕೃಷ್ಣಪ್ಪನ ರಾಜಕೀಯ ಜೀವನದ ಬಹುಭಾಗ ಲೋಹಿಯಾರವರ ಜೀವನಚರಿತ್ರೆಯನ್ನೇ ಹೋಲುತ್ತದೆ. ಸೆರೆವಾಸ, ಸ್ವಾತಂತ್ರ್ಯಕ್ಕಾಗಿ ವಿಭಿನ್ನ ರೀತಿಯಲ್ಲಿ ಹೋರಾಟ, ಈ ಅಂಶಗಳಲ್ಲಿ ಲೋಹಿಯಾರ ಜೀವನ ಕ್ರಮವನ್ನೇ ಅನುಸರಿಸಲಾಗಿದೆ.

ಕೃಷ್ಣಪ್ಪನ ಕ್ರಾಂತಿಕಾರಿ ಗೆಳೆಯ ಅಣ್ಣಾಜಿಯ ಮಾತುಗಳು ಬಂಡವಾಳಶಾಹಿಯ ವಿರುದ್ಧವಾಗಿಯೂ ರೈತಪರವಾಗಿಯೂ ಇದೆ ಎನ್ನುವುದನ್ನು ಗಮನಿಸಬಹುದು. . "ಶುಷ್ಕವಾಗಿ ಬಿಡುವ ದೈನಿಕಗಳನ್ನು ಭ್ರಮೇಲಿ ಗೆಲ್ಲೋದಕ್ಕೂ ನಿಜದಲ್ಲಿ ವಾಸ್ತವವಾಗಿ ಗೆಲ್ಲೋದಕ್ಕೂ ವ್ಯತ್ಯಾಸವಿದೆ. ಉತ್ಪಾದನೆಯ ಸಂಬಂಧಗಳು ಬದಲಾದಾಗ ದುಡಿಮೆ ಸೃಷ್ಟಿಶೀಲವಾಗುತ್ತೆ. ಅಹಂಕಾರದಲ್ಲಿ ಸೆಟೆದು ದೊಣ್ಣೆನಾಯಕನಂತೆ ಓಡಾಡ್ತ ಕ್ಷುದ್ರತೆಯಿಂದ ಹೊರಗೆ ನಿಲ್ತೀನಿ ಅಂತ ನೀನು ತಿಳಿದಿರೋದು ಭ್ರಮೆ. ಹೋಗಿ ರೈತರ ನಡುವೆ ಕೆಲಸ ಮಾಡು. ಅವರನ್ನು ಹೋರಾಟಕ್ಕೆ ಸಂಘಟಿಸು. ನೀನೊಬ್ಬ ಸೂಲಗಿತ್ತೀಂತ ತಿಳಕೊ. ತಾವು ಉಳೋ ನೆಲಕ್ಕವರು ಒಡೆಯರಾಗೋದೇ ನಿಜವಾದ ಭೂಮಿ ಹುಣ್ಣಿಮೆ."[11]

ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಯಾವುದೆ ಉತ್ಪಾದನೆಯಾಗಲಿ ಅದು ಇರುವುದು ಜನರ ಉಪಯೋಗಕ್ಕೆ ಹೊರತು ಅದರಿಂದ ಮತ್ತೊಬ್ಬರು ಲಾಭಗಳಿಸಲು ಅಲ್ಲ ಎಂಬ ಸಮಾಜವಾದಿ ನಿಲುವು ಇಲ್ಲಿ ಕಾಣುತ್ತದೆ. ಆದರೆ ಅಣ್ಣಾಜಿ ಭೌತಿಕ ಆಸ್ತಿಯನ್ನು ಗಂಡು ಹೆಣ್ಣಿನ ಸಂಬಂಧವನ್ನು ಒಂದೇ ದೃಷ್ಟಿಯಲ್ಲಿ ನೋಡುವುದು ವಿಪರ್ಯಾಸವಾಗುತ್ತದೆ. ತಾನು ಹೊಂದಿದ ಭೂಮಿಯೂ, ಹೆಣ್ಣೂ ಸ್ವತಂತ್ರ್ಯವಾಗಿದ್ದಲ್ಲಿ ಸುಖವಿದೆ. ಅದಕ್ಕಿಂತ ದೊಡ್ಡ ನೈತಿಕತೆ ಎಲ್ಲಿದೆ? ಎಂದು ವಾದಿಸುವ ಅಣ್ಣಾಜಿ ತನ್ನ ಸಮಾಜವಾದದಲ್ಲಿ ಹೆಣ್ಣಿಗೂ ಒಂದು ಸಮಾನ ಸ್ಥಾನವಿದೆ ಎಂಬುದನ್ನು ಮರೆತಂತಿದೆ.

ಅಣ್ಣಾಜಿಯ ದಸ್ತಗಿರಿ ಮತ್ತು ಕೊಲೆಯ ಕಾರಣದಿಂದಾಗಿ ಅವನ ಸಹವರ್ತಿಯಾಗಿದ್ದ ಕೃಷ್ಣಪ್ಪ ಜೈಲಿನಲ್ಲಿ

ಹಗಲು-ರಾತ್ರಿಗಳ ಪರಿವೆಯೂ ಇಲ್ಲದೆ ಶಿಕ್ಷೆ ಅನುಭವಿಸಬೇಕಾಗುತ್ತದೆ. ಅಲ್ಲಿ ಪೋಲಿಸ್ ವ್ಯವಸ್ಥೆಯ ದೌರ್ಜನ್ಯಗಳನ್ನು ಕಂಡ ಕೃಷ್ಣಪ್ಪ ಬಿಡುಗಡೆಯ ನಂತರ ಇಂತಹ ಅಮಾನವೀಯತೆಯನ್ನು ಸರಿಪಡಿಸಲು ಪ್ರಯತ್ನಿಸುತ್ತಾನೆ.

ಕೃಷ್ಣಪ್ಪನ ಕಾಯಿಲೆ ದಿನಗಳಲ್ಲಿ ಹೋಟೆಲ್ ಮಾಲಿಕ ವೀರಣ್ಣನಿಂದ ಸಹಾಯ ಪಡೆಯುತ್ತಾನೆ. ವೈಯಕ್ತಿಕವಾಗಿ ಬಂಡವಾಳಶಾಹಿಗಳ ವಿರೋಧಿಯಾದ ಕೃಷ್ಣಪ್ಪ ವೀರಣ್ಣನಿಂದ ಸಹಾಯ ಪಡೆದು ಅವನು ತನ್ನಿಂದ ಯಾವ ಫಲಾಪೇಕ್ಷೆಯನ್ನೂ ನಿರೀಕ್ಷಿಸಿಲ್ಲ ಎಂದು ತಿಳಿಯುತ್ತಾನೆ. ಆದರೆ ಕೃಷ್ಣಪ್ಪನಿಗೇ ತಿಳಿಯದಂತೆ ನಿಧಾನವಾಗಿ ಅವನ ಮನಸ್ಸನ್ನು ವೀರಣ್ಣ ಆವರಿಸಿಬಿಡುತ್ತಾನೆ.

ಹುಲಿಯೂರಿನ ರೈತರ ಗೇಣಿಯ ವಿಷಯವಾಗಿ ಮಠದ ಭಟ್ಟನ ವಿರುದ್ಧ ಧ್ವನಿ ಎತ್ತುತ್ತಾನೆ. ದೇಶದ ನಾನಾಭಾಗಗಳಿಂದ ಸಮಾಜವಾದಿಗಳು ಕೃಷ್ಣಪ್ಪನಿಗೆ ಬೆಂಬಲಿಸುತ್ತಾರೆ.

ಚುನಾಯಿತರಾದ ಕೃಷ್ಣಪ್ಪ ಏಕಕಾಲಕ್ಕೆ ಮಠದ ವಿರುದ್ಧವಾಗಿಯೂ ಜಮೀನ್ದಾರಿಯ ವಿರುದ್ಧವಾಗಿಯೂ ಜನರನ್ನು ಸಂಘಟಿಸುವಲ್ಲಿ ಯಶಸ್ವಿಯಾಗುತ್ತಾನೆ. ಇದೇ ಭಟ್ಟನ ವಿಷಯವಾಗಿ ಕೃಷ್ಣಪ್ಪನಿಗೆ ಆಪ್ತನಾದ ಜೋಯಿಸರು ಭಟ್ಟನ ಪರವಾಗಿ ಮಾತನಾಡಿದಾಗ ಶೋಷಿತ ವರ್ಗದ ಪ್ರತಿನಿಧಿಯಾಗಿ ಕೃಷ್ಣಪ್ಪ ಮಾತನಾಡುತ್ತಾನೆ.

ಕೌಪೀನಧಾರಿಯಾಗಿದ್ದ ಭೈರಾಗಿ ಸರ್ಪಸಿದ್ಧೇಶ್ವರಾನಂದನೆಂದು ಜನರಲ್ಲಿ ಮೌಢ್ಯವನ್ನು ತುಂಬುತ್ತಿರುವುದನ್ನು ಕೃಷ್ಣಪ್ಪ ಟೀಕಿಸುತ್ತಾನೆ. "ದೇವರು ಇದ್ದಾನೋ ಇಲ್ಲವೋ ಎಂಬ ಗೊಂದಲದಲ್ಲೂ ಅವನನ್ನು ಜನ ನಂಬುವಂತೆ, ತನ್ನ ಕ್ರಾಂತಿಯೆಲ್ಲ ಒಳ್ಳೆಯದನ್ನೇ ಮಾಡುತ್ತೆ ಎಂದು ಹೇಳಲಾಗದಿದ್ದರೂ ಸುತ್ತಲಿನ ದುಃಖ ಕ್ಷುದ್ರತೆ ಕಂಡಾಗ ಅದರ ವಿರುದ್ಧ ಹೋರಾಡುತ್ತೇನೆ"[12] ಎನ್ನುವ ಕೃಷ್ಣಪ್ಪನ ನಿಲುವು ಒಂದು ಹಂತದಲ್ಲಿ ನಿರಾಶನಾಗಿರುವುದನ್ನು ಸೂಚಿಸುತ್ತದೆ.

ಕೃಷ್ಣಪ್ಪನ ಹೆಂಡತಿ ಸೀತೆ ಸರ್ಕಾರದಿಂದ ಉಚಿತವಾಗಿ ದೊರಕುವ ಸೈಟಿಗಾಗಿ ವೀರಣ್ಣನ ಬೆಂಬಲವನ್ನು ಪಡೆಯುವುದನ್ನು ಲಂಚಗುಳಿತನ ಎಂದು ಅದನ್ನು ನಿರಾಕರಿಸುತ್ತಾನೆ.

ಹಲವು ದಿನಗಳ ರಾಜಕೀಯ ಜೀವನದ ನಂತರ ಕೃಷ್ಣಪ್ಪನ ವ್ಯಕ್ತಿತ್ವದ ಮೇಲೆ ಅನೇಕರ ಕಣ್ಣು ಬೀಳುತ್ತದೆ. ಕೃಷ್ಣಪ್ಪನಿಗೀಗ "ತಾನು ದೇಶದ ಮುಖ್ಯಮಂತ್ರಿಯಾಗುವುದು ಫ್ಯಾಸಿಸ್ಟರ ಸಂಚನ್ನು ಮುರಿಯಲು ಅಗತ್ಯವೆ? ಅಂಥ ಬಯಕೆ ತನ್ನಲ್ಲಿ ಈಗ ಹುಟ್ಟಿದ್ದಕ್ಕೆ ಅದಕ್ಕೆ ಕಾರಣ ಸಾಯುತ್ತಿರುವ ತನಗೆ ಅಧಿಕಾರದ ಮೂಲಕ ಚೈತನ್ಯವನ್ನು ಪಡೆಯಬೇಕೆಂಬ ಇಚ್ಛೆಯೆ? ಅಥವಾ ವಾರಂಗಲ್ ಠಾಣೆಯಲ್ಲಿ ಕಂಡ ಅಧಿಕಾರದ

ಕ್ರೂರ ಸ್ವರೂಪವನ್ನು ನಾಶಮಾಡಬೇಕೆಂಬ ಆಸೆಯೆ? ವೀರಣ್ಣನ ವರ್ಗಹಿತದ ಮೂಲಕವೂ ಫ್ಯಾಸಿಸ್ಟರನ್ನು ವಿರೋಧಿಸುವುದು ಸಾಧ್ಯವೆ? ಹೀಗೆ ತಾನು ಪ್ರಶ್ನೆ ಕೇಳುವಾಗ ತನ್ನ ವೈಯಕ್ತಿಕ ಹಿತಕ್ಕೆ ವೈಚಾರಿಕ ಕುಮ್ಮಕ್ಕು ಕೊಡುತ್ತಿದ್ದೇನೆಯೆ? [13] ಎಂಬ ಆಲೋಚನೆಯಲ್ಲಿ ತೊಡಗುತ್ತಾನೆ. ವಾಸ್ತವವಾಗಿ ಕೃಷ್ಣಪ್ಪ ರಾಜಕೀಯಕ್ಕೆ ಕಾಲಿಡುವ ಮೊದಲೇ ಸಮಾಜಮುಖಿಯಾಗಿ ಅನೇಕ ಕೆಲಸಗಳನ್ನು ಮಾಡಿದ್ದು, ರಾಜಕೀಯಕ್ಕೆ ಬಂದ ಮೇಲೂ ತನ್ನ ಇಮೇಜ್ ಅನ್ನು ಉಳಿಸಿಕೊಂಡಿರುತ್ತಾನೆ. ಅವನ ಈ ರೀತಿಯ ಆತಂಕಕ್ಕೆ ಕಾರಣವೇ ಇಲ್ಲ. ಆದರೂ ಅಧಿಕಾರಕ್ಕಾಗಿ ಹೀಗೆ ತಾತ್ವಿಕ ಹೋರಾಟ ಮಾಡುತ್ತಿದ್ದಾರೆಂದು ಜನ ಭಾವಿಸಬಹುದೆಂದು ಅಳುಕು ಕೃಷ್ಣಪ್ಪನಿಗೆ.

ಒಂದು ಕಾಲದಲ್ಲಿ ಗೇಣಿ ಪದ್ಧತಿಯಿಂದ ಭೂಮಿ ಕಳೆದುಕೊಂಡವರು ಕೃಷ್ಣಪ್ಪನ ರಾಜಕೀಯವನ್ನೇ ದುರುಪಯೋಗ ಪಡಿಸಿಕೊಂಡು ಅವನ ಬೆಂಬಲಕ್ಕೇ ನಿಲ್ಲುತ್ತಾರೆ. ಇದರ ಮರ್ಮವರಿತ ಕೃಷ್ಣಪ್ಪ ಭೂಮಿಯಲ್ಲಿ ದುಡಿಯೋನ ಪರವಾಗಿ ನಿಲ್ಲಬೇಕು ಎಂಬ ಮನಸ್ಸಾಗುತ್ತದೆ.

ಬಹುಜನರ ಹಿತಾಸಕ್ತಿಯ ಸಲುವಾಗಿ ಕೃಷ್ಣಪ್ಪನೇ ಹೋರಾಡಿ ತಂದ ಕಾನೂನು ಸಣ್ಣ ಹಿಡುವಳಿ ಭೂಮಿ ಹೊಂದಿದ್ದ ಅವನ ತಾಯಿ ಶಾರದಮ್ಮನಿಗೂ ಅದರ ಬಿಸಿ ಮುಟ್ಟುತ್ತದೆ. "ಯಾರಿಗಾದ್ರೂ ಉಳಕ್ಕೆ ಕೊಟ್ರೆ ಭೂಮೀನ ನಂದೆ ಅಂತಾನೆ" ಎನ್ನುವ ಶಾರದಮ್ಮನ ಮಾತುಗಳು ತಾನು ಎಲ್ಲಿಯಾದರೂ ಎಡವಿದೆನೋ ಎಂಬ ಸಂಶಯಕ್ಕೆ ಕೃಷ್ಣಪ್ಪನನ್ನು ತಳ್ಳುತ್ತದೆ.

ಮುಖ್ಯಮಂತ್ರಿಯಾಗಲು ಚುನಾವಣೆಗೆ ನಿಂತ ಕೃಷ್ಣಪ್ಪ ತನ್ನ ಅನಾರೋಗ್ಯದ ಸ್ಥಿತಿಯಲ್ಲಿ ವೀರಣ್ಣನ ಸಹಾಯ ಪಡೆದಮೇಲೂ 'ನಾನು ಚೀಫ್ ಆಗಿರೋ ತನಕ ನಿಮಗೆ ಕಾಂಟ್ರಾಕ್ಟ್ ಸಿಗಲ್ಲ' [14] ಎಂದು ಹೇಳುತ್ತಾನೆ. ತಾನು ರಾಜಕೀಯದಲ್ಲಿದ್ದೂ ಅಧಿಕಾರದ ದುರುಪಯೋಗವಾಗಕೂಡದು ಹಾಗೂ ಜನಹಿತಕ್ಕೆ ಮೊದಲ ಪ್ರಾಶಸ್ತ್ಯ ಎಂಬುದು ಕೃಷ್ಣಪ್ಪನ ನಿಲುವಾಗುತ್ತದೆ. ವೀರಣ್ಣನ ನಡವಳಿಕೆಯಲ್ಲಿ ಸತ್ಯವಿಲ್ಲದಿದ್ದರೂ ಅದನ್ನು ಕೃಷ್ಣಪ್ಪ ಒಪ್ಪಿಕೊಳ್ಳಬೇಕಾಗುತ್ತದೆ. ಆದರೂ ಕೃಷ್ಣಪ್ಪ ರಾಜಕೀಯದಲ್ಲಿ ಜನರಿಗೆ ಮೋಸ ಮಾಡಲೊಲ್ಲ. ಕೃಷ್ಣಪ್ಪ ಇಲ್ಲಿ ಬಂಡವಾಳಶಾಹಿಗಳ ವಿರುದ್ಧ ಸಮಾಜದವಾದವನ್ನು ಬಂಡಾಯವಾಗಿ ಬಳಸುತ್ತಾನೆ.

"ವರ್ಗಗಳು ಸಂಪೂರ್ಣ ನಾಶವಾಗೋ ತನಕ ಸ್ಟೇಟ್ ಇದ್ದೇ ಇರತ್ತೆ. ಸ್ಟೇಟಿಗೆ ಪೋಲೀಸ್ ಬೇಕಾಗಿರುತ್ತೆ.......... ಇವೆಲ್ಲ ನಿಜವಿದ್ರೂ ನೀವು ದಲಿತರ ಪರವಾಗಿ ಫೀಲ್ ಮಾಡ್ತೀರಲ್ಲ, ಈಗ್ಲೇ ಏನಾದರೂ ಮಾಡಬಹುದು ಅಂತ ತಿಳ್ಕೊಂಡಿದೀರಲ್ಲ ಅದಕ್ಕೇ ನಾನು ನಿಮ್ಮ ಜೊತೆ ಇರೋದು........" ಎಂದು ಕೃಷ್ಣಪ್ಪನಿಗೆ ನಾಗರಾಜ್ ಹೇಳುತ್ತಾನೆ. ವ್ಯವಸ್ಥೆ ಕೊಲ್ಲೋ ಕೆಲಸಾನೂ ಮಾಡುತ್ತೆ, ಅದರ ವಿರುದ್ಧ ಪ್ರತಿಭಟನೆಯನ್ನು ಮಾಡುತ್ತೆ ಎಂದು ಹೇಳುತ್ತಾನೆ.[15]

ಇದನ್ನೆಲ್ಲ ಗಮನಿಸಿದ ಕೃಷ್ಣಪ್ಪ ತನ್ನ ಇಮೇಜಿನಿಂದ ಒಬ್ಬ ಶ್ರೀಮಂತನಿಗೆ, ಒಬ್ಬ ಹೋಟೆಲ್

ಉದ್ಯಮಿಗೆ, ಒಂದು ಪಕ್ಷಕ್ಕೆ ಒಬ್ಬ ಬಂಡವಾಳಶಾಹಿಗೆ ಮಾತ್ರವೇ ಲಾಭವಾಗುವುದನ್ನು ಮನಗಂಡು ಅಂತಿಮವಾಗಿ ರಾಜಕೀಯವನ್ನೇ ತ್ಯಜಿಸುತ್ತಾನೆ. ಮರಳಿ ತನ್ನ ಊರಿಗೆ ತೆರಳಲು ಹಂಬಲಿಸಿ ಆ ದಿಕ್ಕಿನಲ್ಲಿ ಕಾರ್ಯಪ್ರವೃತ್ತನಾಗುತ್ತಾನೆ. ರಾಜಕೀಯಕ್ಕೆ ಅಥವಾ ಪ್ರಜಾಪ್ರಭುತ್ವಕ್ಕೆ ಪರ್ಯಾಯವಾದ ದೇಶೀಯ ಮೂಲದ ಪರ್ಯಾಯ ವ್ಯವಸ್ಥೆಯೊಂದನ್ನು ಹುಟ್ಟುಹಾಕಲು ಹಂಬಲಿಸುತ್ತಾನೆ. ವಿಕೇಂದ್ರೀಕೃತ ಅಭಿವೃದ್ಧಿಯನ್ನು ಅಪೇಕ್ಷಿಸುತ್ತಾನೆ. ನಾಗರಾಜ್ ಹೇಳಿದ ಮಾತಿನಿಂದ ಜನಪರವಾಗಿದ್ದಲ್ಲಿ ಬೆಂಬಲವಿದೆ ಎಂಬ ಅಂಶವನ್ನು ಕೃಷ್ಣಪ್ಪ ಮನಗಾಣುತ್ತಾನೆ. ಅವನ ಮನೋಭಾವನೆಯೂ ಅದೇ ಆಗಿದ್ದು ಒಟ್ಟಾರೆಯಾಗಿ ಸಮಾಜವಾದ ಎಂಬುದು 'ಅವಸ್ಥೆ'ಯಲ್ಲಿ ಕೊನೆಯವರೆಗೂ ಹಿಂಬಾಲಿಸುತ್ತದೆ. ಅದು ನಿಜವಾದ ಬಂಡಾಯದ ಸ್ವರೂಪವನ್ನು ಪಡೆದುಕೊಂಡಿದೆ.

ಕೃಷ್ಣಪ್ಪ ಪ್ರಜಾಪ್ರಭುತ್ವವನ್ನು ಜನಹಿತಕ್ಕಾಗಿ ಬಳಸಿಕೊಳ್ಳಲು ಅನೇಕ ಪ್ರಯತ್ನಗಳನ್ನು ಮಾಡಿದರೋ ಅದರಲ್ಲಿ ಪೂರ್ಣಪ್ರಮಾಣದ ಯಶಸ್ಸು ಸಿಗುವುದಿಲ್ಲ. ತನ್ನ ಮುಂದಿನವರಿಗೆ ಒಂದು ಆದರ್ಶವನ್ನು ಮಾತ್ರ ಬಿಟ್ಟುಹೋಗುತ್ತಾನೆ. ಕಾದಂಬರಿಯ ಮೊದಲ ಭಾಗದಲ್ಲಿ ಪ್ರಜಾಪ್ರಭುತ್ವ ಕೃಷ್ಣಪ್ಪನ ಒಂದು ಪ್ರಯೋಗವಾಗಿ ಕಂಡು ಬರುತ್ತದೆ. ಅದರ ಕೊರತೆಗಳು ನ್ಯೂನತೆಗಳು ಕೃಷ್ಣಪ್ಪನನ್ನೇ ಅದರಿಂದ ವಿಮುಖವಾಗುವಂತೆ ಮಾಡುತ್ತದೆ. ಕೊನೆಕೊನೆಗೆ ತನ್ನ ಪಕ್ಷದವರಿಂದಲೇ ಟೀಕೆಗೆ ಗುರಿಯಾಗುತ್ತಾನೆ. ತಾನು ಒಬ್ಬೊಂಟಿ ಅಂದುಕೊಳ್ಳುತ್ತಾನೆ.

ಕೃಷ್ಣಪ್ಪ ತನ್ನ ವಯೋಸಹಜವಾದ ಕಾಯಿಲೆಗಳಿಂದ ಜರ್ಜರಿತನಾಗಿ ಜೀವನದೊಂದಿಗೆ ಹೊಂದಿಕೊಳ್ಳಬೇಕಾಗುತ್ತದೆ. ಆಗ ಅನಿವಾರ್ಯವಾಗಿ ರಾಜಕೀಯದಿಂದಲೂ ವಿಮುಖನಾಗುತ್ತಾನೆ.

ತನ್ನ ಹೋರಾಟದ ಮತ್ತೊಂದು ನೆಲೆಯನ್ನು ಕಂಡುಕೊಳ್ಳುತ್ತಾನೆ. ಜನಪರವಾದ ಹೋರಾಟ ಮೊದಲು ತನ್ನ ಊರಿನಿಂದಲೆ ಪ್ರಾರಂಭವಾಗಲಿ ಎಂಬ ಆಶಯದೊಂದಿಗೆ ರಾಜೀನಾಮೆಯನ್ನು ನೀಡಿ ಹಳ್ಳಿಗೆ ಹಿಂದಿರುಗುವ ಸಿದ್ಧತೆ ಮಾಡುತ್ತಾನೆ.

ಹೀಗೆ ಕೃಷ್ಣಪ್ಪ ಬದುಕಿನುದ್ದಕ್ಕೂ ತನ್ನ ಹೋರಾಟದ ದಾರಿಯಲ್ಲಿ ಹಲವು ತಿರುವುಗಳನ್ನು ಪಡೆಯುತ್ತಾ ಗಾಂಧಿ, ಲೋಹಿಯಾ, ರಾಯ್ ಮುಂತಾದ ಚಿಂತನೆಗಳನ್ನು, ಜನಹಿತಕ್ಕಾಗಿ ಪ್ರಯೋಗಿಸುತ್ತಾ ಸದಾ ಚಲನಶೀಲವಾಗಿ ಹೊಸ ಅನ್ವೇಷಣೆಗೆ ತೊಡಗುತ್ತಾನೆ. ಆ ಮೂಲಕ ಬಂಡಾಯದ ಹಲವು ಮುಖಗಳನ್ನು ಕೃಷ್ಣಪ್ಪನಲ್ಲಿ ಕಾಣಬಹುದಾಗಿದೆ.

ಆದರೆ 'ಅವಸ್ಥೆ' ಕಾದಂಬರಿಯಲ್ಲಿ ಕಂಡು ಬರುವ ಹಲವು ಊರುಗಳು ಸ್ಥಬ್ದವಾಗಿ ಹಿನ್ನೆಲೆಯನ್ನು ಮಾತ್ರ ಒದಗಿಸಿ ಕೊಡುತ್ತದೆ. ಅಲ್ಲಿ ಕೃಷ್ಣಪ್ಪ ನಿರೀಕ್ಷಿಸುವ ಬಂಡಾಯ ಪ್ರಖರವಾಗಿ ಕಂಡು ಬರುವುದಿಲ್ಲ. ಕಾದಂಬರಿಯ ಮೊದಲಿಗೇ ಅಣ್ಣಾಆಜಿಯೊಂದಿಗೆ ಕೃಷ್ಣಪ್ಪ ಕ್ರಾಂತಿಯ ಮಾತನ್ನಾಡುವಾಗ ಅಣ್ಣಾಜಿ ರಷ್ಯಾ,

ಚೀನಾದ ಕ್ರಾಂತಿಯ ಇಂದಿನ ಚಿತ್ರಣವನ್ನು ಉದಾಹರಿಸುತ್ತಾನೆ. "ಕ್ರಾಂತಿಗೆ ಜನರನ್ನ ಸಿದ್ಧಮಾಡಿದ ಪಕ್ಷ ತಾನೇ ಒಡೆಯನಾಗಿ ಬಿಟ್ಟಿದೆ ಅಲ್ಲಿ" ಎಂದು ಅಣ್ಣಾಜಿ ಹೇಳುತ್ತಾನೆ.

ಅಣ್ಣಾಜಿ ಮುಂದುವರಿದು '....... ರೈತರವನಾದ್ದರಿಂದ ನೂರಾರು ಜನರನ್ನು ನಿನ್ನ ಜೊತೇಲಿ ತಗೊಂಡು ಹೋಗಬಲ್ಲೆ ಅಂತ ತಿಳಿದಿದ್ದೀನಿ. ಹೋಗಬಲ್ಲೆ ಅಲ್ಲ, ಹೋಗಲೇ ಬೇಕಾಗುತ್ತೆ. ಇದು ಸೈಂಟಿಫಿಕ್ ಸತ್ಯ. ವ್ಯಕ್ತಿವಾದಿಯಾದರೆ ನಿನ್ನ ಸ್ವಭಾವ ಫ್ಯಾಸಿಸ್ಟ್ ಆಗ್ತಾ ಹೋಗತ್ತೆ. ಆದ್ರಿಂದ ನೀನು ಮಾಸ್ ಮ್ಯಾನ್ ಆಗಬೇಕು. ವರ್ಗ ಹೋರಾಟದ ಮುಂಚೂಣಿಯಲ್ಲಿ ನಿನ್ನಂಥವರು ನಿಲ್ಲಬೇಕು. ಕಮ್ಯೂನಿಸ್ಟರನ್ನು ಮರೆತುಬಿಡು. ಈ ನೆಲದ ಸಾರವನ್ನು ಹೀರಿದ ಈ ಕ್ಷುದ್ರ ಚರಿತ್ರೇನ್ನ, ಹಾಗೇ ವೈಭವವನ್ನು ಅರ್ಥ ಮಾಡಿಕೊಂಡ ಒಂದು ಹೊಸ ಕ್ರಾಂತಿಕಾರಿ ಪಕ್ಷಾನ್ನ ಈ ದೇಶದಲ್ಲಿ ನಾವು ಕಟ್ಟಬೇಕು'[16] ಎಂದು ಹೇಳುತ್ತಾನೆ. ಈ ಅಂಶಗಳು ಕೃಷ್ಣಪ್ಪನಿಗೆ ಸ್ಫೂರ್ತಿಯಾಗುತ್ತದೆ. ಅವನ ಮುಂದಿನ ಪ್ರಯತ್ನಗಳು ಆ ನಿಟ್ಟಿನಲ್ಲಿಯೇ ನಡೆಯುತ್ತದೆ.

ಅಣ್ಣಾಜಿ ಚನ್ನವೀರಯ್ಯನಿಗೆ ಇಂಗ್ಲೀಷ್ ಕಲಿಸಿಕೊಡುವಾಗಲೂ ರಾಜಕೀಯ, ಸಮಾನತೆ ಮುಂತಾದ ವಿಷಯಗಳನ್ನು ಬೋಧಿಸುತ್ತಾನೆ.

ಕೃಷ್ಣಪ್ಪ ನಾಗೇಶನೊಂದಿಗೆ ಮಾತನಾಡುವ ಸಂದರ್ಭದಲ್ಲಿ "ಹಂದಿ ಕುರಿ ತಿನ್ನೋ ನಮ್ಮ ಗೌಡರು ನಿನ್ನಂಥ ಒಬ್ಬ ಪುಳಚಾರು ತಿನ್ನೋ ಬಡಪಾಯಿಯನ್ನು ಒದೀಬೇಕೂಂತ ಅಂತೀಯಲ್ಲ ಅದನ್ನು ಕಲ್ಪಿಸಿಕೊಂಡು ನಗು ಬಂತು. ನಮ್ಮ ಜಾತಿಯ ಜಮೀನ್ದಾರರೇನು ಯೋಗ್ಯರು ಅಂತ ನೀನು ತಿಳ್ದಿರೋದ?"[17] ಎಂದು ವ್ಯಂಗ್ಯವಾಗಿ ಮಾತನ್ನಾಡುತ್ತಾನೆ. ಈ ಮಾತುಗಳಲ್ಲಿ ಒಂದು ವರ್ಗ ಮತ್ತೊಂದು ವರ್ಗವನ್ನು ಬೇರೆ ಬೇರೆ ರೀತಿಯಿಂದ ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುವುದನ್ನು ಬೇರೆ ಬೇರೆ ರೀತಿಯಿಂದ ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುವುದನ್ನು ಕೃಷ್ಣಪ್ಪ ವಿರೋಧಿಸುತ್ತಾನೆ. ಇವುಗಳನ್ನು ನಿರ್ಮೂಲನೆ ಮಾಡುವ ಬಗೆಗೆ ಅವನು ಚಿಂತಿಸುತ್ತಾನೆ.

ಆದರೆ ತಾನು ತರುವ ಪ್ರಗತಿಪರ ಕಾನೂನುಗಳೆಲ್ಲ ನಿಶ್ಚಯವಾಗಿ ಸಮಾಜಕ್ಕೆ ಒಳ್ಳೆಯದನ್ನೇ ಮಾಡುತ್ತದೆಂದು ಅವನಿಗೆ ಅನಿಸುವುದಿಲ್ಲ.

ಹೀಗೆ ಅವಸ್ಥೆಯ ಹಲವು ಸನ್ನಿವೇಶಗಳು ಸಮಾಜವಾದಿ ನಿಲುವಿನಿಂದ ಕೂಡಿದ್ದು ಕೃಷ್ಣಪ್ಪನ ಸಾಮಾಜಿಕ ಜೀವನದ ದೃಷ್ಟಿಯಿಂದಲೂ, ರಾಜಕೀಯ ಜೀವನದ ದೃಷ್ಟಿಯಿಂದಲೂ ಒಂದು ಬಂಡಾಯವಾಗಿ ವ್ಯಕ್ತವಾಗಿದೆ.

**ಅವಸ್ಥೆ - ಗಾಂಧಿ**

ಅಣ್ಣಾಜಿ ಚನ್ನವೀರಯ್ಯನಿಗೆ ಇಂಗ್ಲೀಷ್ ಪಾಠ ಹೇಳಿಕೊಡುವಾಗ ಗಾಂಧೀವಾದವನ್ನು ಹೇಳಿಕೊಡುತ್ತಾನೆ.'ಗಾಂಧೀ ಪಾಲಿಟಿಕ್ಸ್ ಗ್ರಾಸ್ ರೂಟ್ಸ್ ಪಾಲಿಟಿಕ್ಸ್ ಉದಾಹರಣೆಗೆ ಮೇಲು ಮೇಲಿನ ಬದಲಾವಣೆಗಳಿಗೆ ಮಾತ್ರ ಪ್ರಯತ್ನಿಸದೆ ಕಾಮನ್ ಪೀಪಲ್ಸ್‌ನ ಕಾನ್‌ಶಸ್‌ನೆಸ್ಸನ್ನೂ ಬದಲು ಮಾಡಲು ಪ್ರಯತ್ನಿಸೋದು"[18] ಇಂತಹ ಅಂಶಗಳು ಅಣ್ಣಾಜಿ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಗಾಂಧೀ ತತ್ವವನ್ನು ಬಿತ್ತಿ ಆ ಮೂಲಕ ಸಮಾಜ ಸುಧಾರಣೆ ಆಗಬಹುದೆಂದು ಆಶಿಸುತ್ತಾನೆ. ಕೃಷ್ಣಪ್ಪ ತನ್ನ ರಾಜಕೀಯ ವೈರಿಗಳ ವಿರುದ್ಧ ಸೇಡು ತೀರಿಸಿಕೊಳ್ಳಲು ನಿರಾಸಕ್ತನಾಗಿರುತ್ತಾನೆ. ಮುಖ್ಯವಾಗಿ ಅವನಿಗೆ ಗಾಂಧಿಯ ಪ್ರಭಾವವಿರುತ್ತದೆ. ಆ ಅಂಶ ಕೃಷ್ಣಪ್ಪನ ಏಳಿಗೆಗೆ ಮಾರಕವಾಗಿರುತ್ತದೆ. ದುರ್ಬಲಗೊಂಡ ರಾಜಕೀಯ ವ್ಯವಸ್ಥೆಯಲ್ಲಿ ಪ್ರಾಮಾಣಿಕನಾಗಿ ಉಳಿಯುವುದು ಕೃಷ್ಣಪ್ಪನಿಗೆ ಕಷ್ಟವಾಗುತ್ತದೆ.

ಕೃಷ್ಣಪ್ಪ ಸೆರೆವಾಸದಲ್ಲಿದ್ದು ಉಪವಾಸ ಕೈಗೊಳ್ಳುತ್ತಾನೆ. ತನ್ನ ಅಧಿಕಾರಿಗಳಿಗೂ ಅದು ತಲುಪಲಿ ಎಂದು ಬಯಸುತ್ತಾನೆ. ಸೆರೆವಾಸದಲ್ಲಿದ್ದುಕೊಂಡೆ ಅದರ ನೋವನ್ನು ಕಡಿಮೆ ಮಾಡಿಕೊಳ್ಳಲು ಗೌರಿಯನ್ನು ನೆನೆಯುತ್ತಾನೆ. ಅವಳನ್ನು ಹಿಡಿದಿಟ್ಟಿರುವ 'ಸಿಸ್ಟಮ್' ಅನ್ನು ಬದಲು ಮಾಡುವ ಬಗ್ಗೆ ಹಿಂದೆ ಅಣ್ಣಾಜಿಯೊಂದಿಗೆ ಆಡಿದ ಮಾತುಗಳನ್ನು ನೆನೆಯುತ್ತಾನೆ. ಈಗ ಕೃಷ್ಣಪ್ಪ ಒಳಗೊಳಗೇ ಇಂತಹ ಅನ್ಯಾಯಗಳ ವಿರುದ್ಧ ಮತ್ತಷ್ಟು ಗಟ್ಟಿಯಾಗುತ್ತಾನೆ.

ಬೆಂಗಳೂರಿನ ದೊಡ್ಡ ಹೋಟೆಲ್‌ಗಳ ಮಾಲಿಕ ವೀರಣ್ಣನ ಬಗೆಗಿನ ಕೃಷ್ಣಪ್ಪನ ಧೋರಣೆಯೂ ವಿಭಿನ್ನವಾಗಿದೆ. ಅವನ ಸೇವೆಯನ್ನು ಕೃಷ್ಣಪ್ಪ ನಿಸ್ವಾರ್ಥ ಸೇವೆ ಎಂದುಕೊಳ್ಳುತ್ತಾನೆ. ಅವನು ಬಂಡವಾಳಶಾಹಿಯಾದರೂ ಅವನನ್ನು ಕೃಷ್ಣಪ್ಪ ನಿಸ್ವಾರ್ಥ ಸೇವೆ ಎಂದುಕೊಳ್ಳುತ್ತಾನೆ. ಅವನು ಬಂಡವಾಳಶಾಹಿಯಾದರೂ ಅವನನ್ನು ಕೃಷ್ಣಪ್ಪ ದೂರ ಇಡುವುದಿಲ್ಲ. ಅದಕ್ಕೆ ಕೃಷ್ಣಪ್ಪ ಅಂದುಕೊಳ್ಳುವ ಕಾರಣ ಕಾದಂಬರಿಯಲ್ಲಿ ಹೀಗಿದೆ "ಕೃಷ್ಣಪ್ಪ ವಿರೋಧಿಸುತ್ತಿದ್ದುದು ವ್ಯವಸ್ಥೆಯನ್ನೇ ಹೊರತು ವ್ಯಕ್ತಿಗಳನ್ನಲ್ಲವಲ್ಲ. ವೀರಣ್ಣ ಕೂಡ ಈ ವ್ಯವಸ್ಥೆಯಲ್ಲಿ ಎಲ್ಲರಂತೆ ಒಬ್ಬನಲ್ಲವೆ?" ಹೀಗೆ ಕೃಷ್ಣಪ್ಪ ಒಂದು ರೀತಿಯಲ್ಲಿ ದ್ವಂದ್ವಕ್ಕೆ ಸಿಲುಕುತ್ತಾನೆ. ಕೃಷ್ಣಪ್ಪನ ರಾಜಕೀಯ ಜೀವನದ ಮತ್ತೊಂದು ಹಂತದಲ್ಲಿ ಹಿಂದು-ಮುಸ್ಲಿಮರ ಗಲಾಟೆಯಲ್ಲಿ ಮಧ್ಯ ಪ್ರವೇಶಿಸಿ ಮುಸ್ಲಿಂ ಜನಾಂಗದ ಮೇಲೆ ದೌರ್ಜನ್ಯವೆಸಗಿದೆ ಹಿಂದುಗಳನ್ನು ಸ್ಪಷ್ಟ ಮಾತುಗಳಿಂದ ಖಂಡಿಸುತ್ತಾನೆ. ಪಕ್ಷದ ಒಳಗಿನಿಂದಲೂ ಹಿಂದೂಗಳಿಂದಲೂ ಏಕಕಾಲಕ್ಕೆ ಬೆದರಿಕೆಯನ್ನು ಎದುರಿಸಬೇಕಾಗುತ್ತದೆ. ಈ ಘಟನೆಯಿಂದ ಕೃಷ್ಣಪ್ಪ ಮತ್ತಷ್ಟು ಗಟ್ಟಿಯಾಗುತ್ತಾನೆ.[19] ಯಾವ ಸಂದರ್ಭದಲ್ಲಿ ಯಾವ ವರ್ಗವನ್ನೂ ಕಡೆಗಣಿಸದೆ ಎಲ್ಲರನ್ನೂ ಸಮಾನವಾಗಿ ಕಾಣುತ್ತಾನೆ.

ರಾಜಕೀಯವಾಗಿ ಕೃಷ್ಣಪ್ಪ ಸಾಕಷ್ಟು ಸಹಾಯವನ್ನು ಜನರಿಗೆ ಮಾಡಿದ್ದರೂ ಅದರೊಳಗಿನ

ವಿದ್ಯಮಾನಗಳಿಂದ ಮುಜುಗರಗೊಂಡು ಬಡಜನರ ಉದ್ಧಾರಕ್ಕಾಗಿ ಅವರನ್ನು ನೈತಿಕವಾಗಿ ಮೇಲೆತ್ತಲು ಪ್ರಯತ್ನಿಸುತ್ತಾನೆ. ಕಡೆಗೆ ರಾಜೀನಾಮೆ ನೀಡಿ ಅವರ ಅಭಿವೃದ್ಧಿಗೆ ಆಧುನೀಕರಣವಲ್ಲದ ಪರ್ಯಾಯ ಸಂಸ್ಕೃತಿಯೊಂದನ್ನು ಹುಟ್ಟುಹಾಕಲು ತನ್ನೂರಿಗೆ ತೆರಳುವ ನಿರ್ಣಯ ಮಾಡುತ್ತಾನೆ. ಅವನ ಈ ಆಲೋಚನೆಗಳಲ್ಲಿ ಗಾಂಧೀಜಿಯವರ ಪರಿಪೂರ್ಣ ಸ್ವಾವಲಂಬಿ ಸ್ವರಾಜ್ಯ ನಿರ್ಮಾಣದ ಕನಸು ಇರುವುದನ್ನು ಗುರುತಿಸಬಹುದು.

ಹಿಂದುಗಳು ಎಸಗಿದ ದೌರ್ಜನ್ಯವನ್ನು ಖಂಡಿಸಿದ ಕೃಷ್ಣಪ್ಪನನ್ನು ಕೊಲ್ಲುವ ಬೆದರಿಕೆ ಪತ್ರಗಳು ಬರತೊಡಗುತ್ತವೆ. ಮುಸ್ಲಿಮರು ಹೇಗೋ ಆಳುವ ಪಕ್ಷಕ್ಕೇ ಓಟು ಕೊಡುವಾಗ ನಾವು ಈ ರೀತಿ ಹೇಳಿಕೆ ಕೊಟ್ಟು ಹಿಂದುಗಳ ಓಟನ್ನೇಕೆ ಕಳೆದುಕೊಳ್ಳಬೇಕೆಂದು ಕೃಷ್ಣಪ್ಪನ ಪಕ್ಷದವರೇ ಟೀಕಿಸುತ್ತಾರೆ. ಈ ಘಟನೆಗಳಿಂದ, ಈ ವಿದ್ಯಮಾನಗಳಿಂದ ಕೃಷ್ಣಪ್ಪ ಮತ್ತಷ್ಟು ಉತ್ತೇಜಿತನಾಗಿ ದುರ್ಬಲರ ಪರವಾದ ಹೋರಾಟಕ್ಕೆ ಮತ್ತಷ್ಟು ತೊಡಗುತ್ತಾನೆ.

ಇದೇ ರೀತಿ ಕೃಷ್ಣಪ್ಪನ ರಾಜಕೀಯ ಅನುಯಾಯಿಯಾದ ರೆಹಮಾನ್ ಕೂಡ ಇಂತದ್ದೇ ಗೊಂದಲದಲ್ಲಿ ಬೀಳುತ್ತಾನೆ. ಮಡಿವಂತ ಮುಸ್ಲಿಮರು ಈ ಕ್ರಾಂತಿಯಲ್ಲಿ ಭಾಗಿಯಾಗದೆ ರೆಹಮಾನ್‌ನನ್ನು ಹಿಂದುಗಳು ಚಮಚಾ ಎಂದು ಟೀಕಿಸುತ್ತಾರೆ. ಆದರೆ ಹಿಂದುಗಳಿಂದ ಅನುಮಾನಕ್ಕೆ ಒಳಗಾಗಿದ್ದ ರೆಹಮಾನ್ ಕೃಷ್ಣಪ್ಪನನ್ನು ಸಹೋದರನೆಂದು ಭಾವಿಸಿದ್ದ. ಹಿಂದೂ ಮುಸ್ಲಿಮರಾದ ಇವರೀರ್ವರ ನಡುವೆ ಬೆಳೆದ ಸಂಬಂಧವು ಗಾಂಧಿ ವಾದದ ಆಶಯವಾಗಿತ್ತು ಎನ್ನಬಹುದು. ಎರಡೂ ವರ್ಗದಿಂದ ಒಂದಾಗಿ ಬಾಳಬೇಕೆಂಬ ಇಚ್ಛೆ ಮೊಳೆತಿರುವುದನ್ನು ಇಲ್ಲಿ ಗುರುತಿಸಬಹುದು. ಕಾದಂಬರಿಯ ಈ ಅಂಶವು ಸಾಮಾಜಿಕ ಕ್ರಾಂತಿಯೇ ಸರಿ. ಪ್ರಕ್ಷುಬ್ಧವಾಗಿರುವ ದೇಶದಲ್ಲಿ ಹೀಗೆ ಕೃಷ್ಣಪ್ಪ ರೆಹಮಾನರು ಯಾವುದೇ ಬೇಧವಿಲ್ಲದೆ ಸಮಾಜದ ಹಿತಕ್ಕಾಗಿ ಒಂದಾಗುವುದು ಜನಪರವಾಗಿ ಆಲೋಚಿಸುವುದು ಬಂಡಾಯದ ಅಂಶವಾಗಿ ವ್ಯಕ್ತವಾಗಿದೆ. 'ಲ್ಯಾಂಡ್ ಸೀಲಿಂಗನ್ನು ಕೆಳಗಿಳಿಸುವುದು', 'ಭೂ ಹೀನರಿಗೆ ಮಿನಿಮಮ್ ವೇಜ್ ಫಿಕ್ಸ್ ಮಾಡುವುದು' ಅವರ ಮುಂದಿನ ಆಲೋಚನೆಯಾಗಿದೆ.

ಹೀಗೆ 'ಅವಸ್ಥೆ'ಯಲ್ಲಿ ಗಾಂಧಿ ವಿಚಾರಗಳು ಸೌಹಾರ್ದತೆಯನ್ನು ಸಾರುತ್ತದೆ. ರಾಜಕೀಯದ ಅನೀತಿಯ ವಿರುದ್ಧ ಹೊಸ ಮಾರ್ಗವನ್ನು ರೂಪಿಸಲು ಪ್ರಯತ್ನಿಸುತ್ತದೆ. ಒಟ್ಟಾರೆ ಗಾಂಧೀವಾದ ಎಂಬುದು ಇಲ್ಲಿ ಬಂಡಾಯದ ಅಂಶವಾಗಿ ಬೆಳೆದಿದೆ.

### ಅವಸ್ಥೆ - ಪ್ರಜಾಪ್ರಭುತ್ವ

ಅವಸ್ಥೆ ಕಾದಂಬರಿಯಲ್ಲಿ ಕೃಷ್ಣಪ್ಪನೇ ಕೇಂದ್ರ ಪಾತ್ರವಾಗಿದ್ದು ಸಾಮಾಜಿಕ ಹೋರಾಟದಲ್ಲಿ

ಮುಂದಾಳಾಗಿರುತ್ತಾನೆ. ಜನರನ್ನು ಬಂಡವಾಳಶಾಹಿ ಮತ್ತು ಪುರೋಹಿತಶಾಹಿಯ ವಿರುದ್ಧ ಹೋರಾಟಕ್ಕೆ ಹುರಿದುಂಬಿಸುತ್ತಾನೆ. ಕಾನೂನಿನ ಪ್ರಕಾರ ರೈತರನ್ನು ಸಂಘಟಿತರಾಗಿ ತಮ್ಮ ತಮ್ಮ ಹೊಲಗಳಲ್ಲಿ ಉಳುವಂತೆ ಮಾಡುತ್ತಾನೆ. ಹುಲಿಯೂರಿನಲ್ಲಿ ನಡೆಯುವ ಈ ಕ್ರಾಂತಿಯು ದೇಶದ ತುಂಬೆಲ್ಲಾ ಪ್ರಸಿದ್ಧವಾಗುತ್ತದೆ. ರೈತರ ಹೋರಾಟ ತಕ್ಕ ಮಟ್ಟಿನ ಯಶಸ್ಸನ್ನು ಪಡೆಯುತ್ತದೆ. ಭೂಮಿಯ ಹಕ್ಕುಗಳ ಬಗ್ಗೆ ದೊಡ್ಡ ಮಟ್ಟದ ಹೋರಾಟವನ್ನು ಜಮೀನ್ದಾರರು ಎದುರಿಸುತ್ತಾರೆ. ಆ ಕಾರಣದಿಂದಾಗಿ ಸಿಗುವ ಜನ ಮನ್ನಣೆಯಿಂದ ಕೃಷ್ಣಪ್ಪ ಚುನಾವಣೆಯಲ್ಲಿ ಆಯ್ಕೆಯಾಗುತ್ತಾನೆ.

ಕೃಷ್ಣಪ್ಪ ಈಗ ನಿಜವಾದ ಅರ್ಥದಲ್ಲಿ 'ಮಾಸ್ ಮ್ಯಾನ್' ಆಗಲು ಪ್ರಯತ್ನಿಸುತ್ತಾನೆ. ಕೃಷ್ಣಪ್ಪ ತಂದ ಉಳುವವನಿಗೇ ಭೂಮಿ ಎಂಬ ಕಾನೂನಿನಿಂದ ಸಾಕಷ್ಟು ಕ್ರಾಂತಿಯಾಗುತ್ತದೆ. ತನ್ನ ಅಧಿಕಾರಾವಧಿಯಲ್ಲಿ ಪ್ರಜಾಪ್ರಭುತ್ವವನ್ನು ಅತ್ಯಂತ ಯಶಸ್ವಿಯಾಗಿ ಬಳಸಿದ ಹೆಮ್ಮೆ ಅವನಿಗೆ ಉಳಿಯುತ್ತದೆ. ಆದರೆ ಅದೇ ವೇಳೆ ಮುಂದೆ ತನ್ನ ಪಾಲಾಗಿ ಬರಬಹುದಾದ ತನ್ನ ತಾಯಿಯ ಜಮೀನನ್ನು ಬೇರೆಯವರಿಗೆ ಉಳಲು ಕೊಟ್ಟರೆ ಅದು ಕಳೆದುಹೋಗಬಹುದೆಂಬ ತಾಯಿಯ ಆತಂಕ ಕೃಷ್ಣಪ್ಪನಿಗೂ ತಟ್ಟುತ್ತದೆ. "ಏನಿದೆ ಅಂತ ನಾನಿರ್‍ಲೊ? ಈ ಮನೆ ಸುತ್ತ ಮುತ್ತ ಒಂದೇ ಒಂದು ಹಿಡಿಮಣ್ಣು ಸಿಗಲ್ಲ. ಎಲ್ಲು ದಿನಕ್ಕಿಂತ ಹೆಚ್ಚು ನಾನಿಲ್ಲಿ ಇರಲ್ಲಪ್ಪ. ನಿನ್ನ ಗದ್ದೆಯಿದೆಯಲ್ಲ ಅದನ್ನ ನಾನು ಉಳಿಸಿಕೊಂಡಿರಬಾರ್ದ ಯಾರಿಗಾರೊ ಉಳಕ್ಕೆ ಕೊಟ್ರೆ ಅವನು ನಾಳೆ ಅದು ನಂದೇ ಅಂತಾನೆ. ಅದೆಂಥದೋ ಕಾನೂನನ್ನ ನೀನೇ ಮಾಡ್ಸಿದಿಯಂತಲ್ಲ ಅನುಭವಿಸಬೇಕಾಗುತ್ತೆ."[20] ಎಂದು ಹೇಳುವ ಕೃಷ್ಣಪ್ಪನ ತಾಯಿಯ ಮಾತುಗಳಲ್ಲಿ ಕೃಷ್ಣಪ್ಪ ಹೊರಡಿಸಿದ ಕಾನೂನಿನ ಬಂಡಾಯದ ಪ್ರಖರತೆಯನ್ನು ಕಾಣಬಹುದು.

ಹಿಂದು ಮುಸ್ಲಿಂ ಗಲಾಟೆಯೊಂದರಲ್ಲಿ [ಪುಟ -೧೩೧- ಅವಸ್ಥೆ] ಅದನ್ನು ತನ್ನ ರಾಜಕೀಯ ಲಾಭವಾಗಿ ಬಳಸಿಕೊಳ್ಳದೆ ನ್ಯಾಯಪಕ್ಷಪಾತಿಯಾಗಿ ವರ್ತಿಸುತ್ತಾನೆ. ಗಲಾಟೆ ನಡೆದ ಕ್ಷೇತ್ರದಲ್ಲಿ ಮುಸ್ಲಿಂ ಕುಟುಂಬವನ್ನು ಕೊಂದ ಹಿಂದುಗಳನ್ನು ಖಂಡಿಸುತ್ತಾನೆ. ಇದರಿಂದ ಹಿಂದುಗಳ ಓಟು ಕೃಷ್ಣಪ್ಪನಿಗೆ ಸಿಗಲಾರದೆಂಬ ಆತಂಕ ಪಕ್ಷದ ಇತರರಲ್ಲಿ ಮೂಡಿ, ಅವರನ್ನು ಎದುರಿಸಬೇಕಾಗುತ್ತದೆ. ಕೃಷ್ಣಪ್ಪ ಅದನ್ನೆಲ್ಲಾ ಲೆಕ್ಕಿಸದೆ ಪ್ರಜಾಪ್ರಭುತ್ವ ವ್ಯವಸ್ಥೆಗೆ ನೀಡಬೇಕಾದ ಗೌರವವನ್ನು ನೀಡುತ್ತಾನೆ. ಚುನಾವಣೆಯ ಘನತೆಯನ್ನು ಕಾಪಾಡುತ್ತಾನೆ. ತನ್ನ ಸಹವರ್ತಿಯಾದ ರೆಹಮಾನ್ ತನ್ನನ್ನು ಆದರ್ಶ ನಾಯಕನನ್ನಾಗಿಯೇ ಉಳಿಸಲು ಪ್ರಯತ್ನಿಸಿದುದನ್ನು ಕೃಷ್ಣಪ್ಪ ಸಹಿಸುವುದಿಲ್ಲ.

ಕೃಷ್ಣಪ್ಪ, ನಾಗರಾಜ, ರೆಹಮಾನ್ ಈ ಮೂವರ ಸಂಭಾಷಣೆಯನ್ನು ಗಮನಿಸಿದರೆ ಹೊಸದೊಂದು ಮಾರ್ಗಕ್ಕಾಗಿ ಅವರು ಹುಡುಕಾಟ ನಡೆಸಿದಂತೆ ಕಾಣುತ್ತದೆ. ಪೋಲೀಸ್ ವ್ಯವಸ್ಥೆಯ ದುರ್ಬಳಕೆ, ಅದರ ಶಕ್ತಿಯಿಂದ ಇತರರ ಮೇಲೆ ಅವರು ನಡೆಸುತ್ತಿರುವ ದಬ್ಬಾಳಿಕೆ ಇವುಗಳನ್ನು ವಿಮರ್ಶಿಸುತ್ತಾರೆ.

'ವರ್ಗಗಳು ಸಂಪೂರ್ಣ ನಾಶವಾಗೋ ತನಕ ಸ್ಟೇಟ್ ಇದ್ದೇ ಇರುತ್ತೆ. ಸ್ಟೇಡಿಗೆ ಪೋಲೀಸ್ ಬೇಕಾಗಿರುತ್ತೆ................. ಇವೆಲ್ಲ ನಿಜವಾದ್ರೂ ನೀವು ದಲಿತರ ಪರವಾಗಿ ಫೀಲ್ ಮಾಡ್ತೀರಲ್ಲ, ಈಗ್ಲೇ ಏನಾದರೂ ಮಾಡಬಹುದು ಅಂತ ತಿಳ್ಕೊಂಡಿದೀರಲ್ಲ ಅದಕ್ಕೇ ನಾನು ನಿಮ್ಮ ಜೊತೆ ಇರೋದು......"[21] ಎಂದು ನಾಗರಾಜ್ ಮಾತನಾಡುತ್ತಾನೆ. ಅವನ ಮಾತುಗಳಲ್ಲಿ ಕೃಷ್ಣಪ್ಪನ ರಾಜಕೀಯ ಜೀವನ ಇನ್ನೂ ಮುಂದುವರೆಯಲಿ, ಎಲ್ಲರಿಗೂ ಅದರಿಂದ ಅನುಕೂಲವಿದೆ ಎಂಬ ಭಾವನೆ ಅಡಕವಾಗಿದೆ. ಆದರೆ ಚಿಕ್ಕಮಗಳೂರಿನಲ್ಲಿ ನಡೆದ ಹಿಂದೂ - ಮುಸ್ಲಿಂ ಗಲಭೆ, ಅದನ್ನು ತನ್ನವರೇ ಮಾಡಿಸುತ್ತಿದ್ದಾರೆ ಮುಂತಾದ ವಿಷಯಗಳಿಂದ ಜರ್ಜರಿತನಾದ ಕೃಷ್ಣಪ್ಪ "ಪ್ರೇಮ ಮುಖ್ಯ. ಅದನ್ನ ಕಳಕೊಂಡು ಎಂಥ ಕ್ರಾಂತಿ ಮಾಡೋಕೆ ಸಾಧ್ಯ? ಮಾಡಿ ಏನು ಪ್ರಯೋಜನ?"[22] ಎಂಬ ಮಾತುಗಳನ್ನ ಆಡುತ್ತಾನೆ. ಎಂದರೆ ರಾಜಕೀಯದಲ್ಲಿ ಒಲವಿಲ್ಲದೆ ಮಾಡುವ ಕ್ರಾಂತಿ ಅಥವಾ ಜನರಲ್ಲಿ ಪ್ರೀತಿ ಇಲ್ಲದೆ ಬರಿಯ ಅಧಿಕಾರಕ್ಕಾಗಿ ಏಕೆ ರಾಜಕೀಯ ಮಾಡಬೇಕೆಂಬುದು ಕೃಷ್ಣಪ್ಪನ ನಿಲುವು. ಹಾಗಾಗಿಯೇ ರಾಜಕೀಯದಿಂದ ಕೃಷ್ಣಪ್ಪ ವಿಮುಖನಾಗುತ್ತಾನೆ. ಕೃಷ್ಣಪ್ಪ ರಾಜಕೀಯ ವ್ಯಕ್ತಿಯಾಗಿ ಸಾಕಷ್ಟು ಸುಧಾರಣೆಯನ್ನು ತಂದರೂ ವೈಯಕ್ತಿಕ ಲಾಭಕ್ಕಾಗಿ ಯಾವ ಕೆಲಸವನ್ನೂ ಮಾಡಿಕೊಳ್ಳುವುದಿಲ್ಲ.

ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಜನ ಹಿತಕ್ಕಾಗಿ ಬಳಸುತ್ತಾನೆ. ಅದೇ ರೀತಿಯಲ್ಲಿ ಪ್ರಜಾಪ್ರಭುತ್ವದಲ್ಲಿ ಇರುವ ಹುಳುಕುಗಳನ್ನು ಸರಿಪಡಿಸಬೇಕೆಂಬ ಆಶಯವನ್ನು ವ್ಯಕ್ತ ಪಡಿಸುತ್ತಾನೆ. ಪೋಲೀಸ್ ದೌರ್ಜನ್ಯವನ್ನು ಖಂಡಿಸುತ್ತಾನೆ. ಅದರ ದುರ್ಬಳಕೆಯನ್ನು ತಪ್ಪಿಸಲು ಚಿಂತಿಸುತ್ತಾನೆ.

ಹೀಗೆ ಕೃಷ್ಣಪ್ಪ ಅಧಿಕಾರಶಾಹಿಯ ವಿರುದ್ಧ, ಬಂಡವಾಳಶಾಹಿಯ ವಿರುದ್ಧ ಮತ್ತು ಪುರೋಹಿತಶಾಹಿಯ ವಿರುದ್ಧ ಜನರನ್ನು ಸಂಘಟಿಸಿ ನಿಜವಾದ ಪ್ರಜಾಪ್ರಭುತ್ವದ ಶಕ್ತಿಯನ್ನು ಅವರಿಗೆ ಅರಿವು ಮಾಡಿಕೊಡುತ್ತಾನೆ.

ಈ ಅಂಶಗಳು ಕೃಷ್ಣಪ್ಪನ ರಾಜಕೀಯ ಜೀವನ ಪ್ರಖರವಾಗಲು ಹೇಗೆ ಕಾರಣವಾಗಿದೆಯೋ ಹಾಗೆಯೇ ಕಾದಂಬರಿಯಲ್ಲಿ ದುರ್ಬಲ ಸಮುದಾಯದ ಬಂಡಾಯವಾಗಿ ಕಾಣಿಸಿಕೊಂಡಿದೆ. ಈ ಕಾದಂಬರಿಯ ಮಟ್ಟಿಗೆ ಸಾಕಷ್ಟು ಕ್ರಿಯಾಶೀಲವಾಗಿಯೂ ಯಶಸ್ವಿಯಾಗಿಯೂ ಬಂಡಾಯದ ಅಂಶಗಳು ಕಂಡು ಬರುತ್ತದೆ. ಈ ಕಾದಂಬರಿಯ ಮೂಲಕ ಯು. ಆರ್. ಅನಂತಮೂರ್ತಿಯವರು ಬಂಡಾಯದ ವಿವಿಧ ಸ್ವರೂಪಗಳನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಕೃಷ್ಣಪ್ಪನ ಪಾತ್ರದ ಮೂಲಕ ಪರಿವರ್ತನಶೀಲವಾದ ಬಂಡಾಯವನ್ನು ಕಾಣಬಹುದು. ಕಾದಂಬರಿಯ ಪ್ರಾರಂಭದಲ್ಲಿ ಕೃಷ್ಣಪ್ಪ ಅಣ್ಣಾಜಿಯ ಜೊತೆಗೆ ವಾದ ಮಾಡುವುದನ್ನು ಗಮನಿಸಿದರೆ ಸಮಾಜವಾದಿಯಾಗಿ ಸಮಾನತೆಯನ್ನು ತರುವ ಸೂಚನೆಗಳನ್ನು ಕಾಣಬಹುದು. ಆನಂತರ ಆದ ಪರಿಣಾಮವಾಗಿ ಚುನಾವಣೆಗಳಲ್ಲಿ ಸ್ಪರ್ಧಿಸಬೇಕಾಗುತ್ತದೆ. ಅದರಲ್ಲಿ ಯಶಸ್ವಿಯಾದ ಮೇಲೂ ರಾಜಕೀಯದ ದ್ವಂದ್ವ ನೀತಿಗಳಿಂದ ಬೇಸತ್ತ ಕೃಷ್ಣಪ್ಪ ಅದಕ್ಕೆ ರಾಜೀನಾಮೆ ನೀಡುತ್ತಾನೆ. ಅಧಿಕಾರದಲ್ಲಿದ್ದಾಗ ರೈತ ಪರವಾಗಿ ಕಾನೂನುಗಳನ್ನು ಕೈಗೊಳ್ಳುತ್ತಾನೆ. ಕೊನೆಗೆ ಗಾಂಧೀಜಿಯವರ ಸ್ವಕೀಯ ಪ್ರಜ್ಞೆಯನ್ನು ತಾನೂ ಬೆಳೆಸಿಕೊಂಡು

ಗ್ರಾಮದ ಉದ್ಧಾರ, ರೈತರ ಉದ್ಧಾರವೇ ನಿಜವಾದ ಬಂಡಾಯವೆಂದು ತಿಳಿದು ತನ್ನೂರಿಗೆ ಹಿಂತಿರುಗಿ ಅಲ್ಲಿ ಜನಪರ ಕಾಳಜಿಯಿಂದ ದುಡಿಯುವ ಸೂಚನೆಯು ಕಂಡು ಬರುತ್ತದೆ. ಒಟ್ಟಾರೆಯಾಗಿ ಕಾದಂಬರಿಯಲ್ಲಿ ಈ ಅಂಶಗಳು ಬಂಡಾಯವಾಗಿ ವ್ಯಕ್ತವಾಗಿದೆ.

## ಭವ

### ವೈಯಕ್ತಿಕ ನೆಲೆಯಲ್ಲಿ ಬಂಡಾಯ

೧೯೯೪ರಲ್ಲಿ ಪ್ರಕಟವಾದ ಈ ಕಾದಂಬರಿಯು ತಾತ್ವಿಕ, ವೈಚಾರಿಕ ವಿಷಯಗಳನ್ನು ಒಳಗೊಂಡಿದೆ. ಉಪನಿಷತ್ತಿನಲ್ಲಿ ಬರುವ ಸತ್ಯಕಾಮ-ಜಾಬಾಲಿಯರ ಕಥೆ ಹಾಗೂ ಮಹಾಭಾರತದ ಕರ್ಣನ ಹುಟ್ಟಿನ ಪ್ರಶ್ನೆ ಇವುಗಳ ಎಳೆಯನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ವೈಯಕ್ತಿಕವಾದಂತಹ ತಪ್ಪುಗಳು ಸಂಬಂಧಗಳ ನಡುವೆ ಗೊಂದಲವನ್ನು ಸೃಷ್ಟಿಸುತ್ತವೆ. ಇದರ ಜೊತೆಗೆ ಸಾಮಾಜಿಕ ಹಾಗೂ ಧಾರ್ಮಿಕ ನಂಬಿಕೆಗಳು ಅನಿವಾರ್ಯವಾಗಿ ಈ ಗೊಂದಲವನ್ನು ಮತ್ತಷ್ಟು ಹೆಚ್ಚು ಮಾಡುತ್ತವೆ.

ಈ ರೀತಿಯ ಗೊಂದಲಗಳಿಂದ ಹೊರಬರುವ ಮಾರ್ಗಕ್ಕಾಗಿ ಕಾದಂಬರಿಯ ಪ್ರತೀಪಾತ್ರವೂ ಹುಡುಕಾಡುತ್ತದೆ. ವಿಶ್ವನಾಥ ಶಾಸ್ತ್ರಿಗಳ ಗೊಂದಲಗಳಿಂದ ಪ್ರಾರಂಭವಾಗಿ ಪ್ರಸಾದನು ಸನ್ಯಾಸವನ್ನು ಪಡೆಯುವವರೆಗೆ ಕಾದಂಬರಿಯಲ್ಲಿ ಸಂಬಂಧಗಳ ಬಗ್ಗೆಯೇ ಮಾತನಾಡಲಾಗಿದೆ. ಇಡೀ ಕಾದಂಬರಿಯಲ್ಲಿ ಪುಟ್ಟ ಪುಟ್ಟ ಘಟನೆಗಳು ಒಟ್ಟುಗೂಡಿದ್ದು ಹಲವಾರು ಪಾತ್ರಗಳು ಕಾಣಿಸಿಕೊಂಡರೂ ಶಾಸ್ತ್ರಿಗಳು, ದಿನಕರ ನಾರಾಯಣ ತಂತ್ರಿ, ಪ್ರಸಾದ, ತ್ರಿಪಾಠಿಗಳು, ಸೀತಮ್ಮ, ಗಂಗೂಬಾಯಿ, ರಾಧ ಈ ಪಾತ್ರಗಳು ಪ್ರಮುಖವಾಗಿದೆ. ಯು. ಆರ್. ಅನಂತಮೂರ್ತಿಯವರ ಉಳಿದ ನಾಲ್ಕು ಕಾದಂಬರಿಗಳು ಸಾಮಾಜಿಕ ದೃಷ್ಟಿಕೋನವನ್ನು ಹೊಂದಿದ್ದು ಬಂಡಾಯದ ಅಂಶಗಳಿಂದ ಕೂಡಿದೆ. ಆದರೆ 'ಭವ'ದಲ್ಲಿ ಸಾಮಾಜಿಕ ದೃಷ್ಟಿಕೋನಕ್ಕಿಂತ ವೈಯಕ್ತಿಕ ಹಿತಾಸಕ್ತಿಯೇ ಮುಖ್ಯವಾಗಿ, ಇಹ-ಪರಗಳ ಜಿಜ್ಞಾಸೆಯಲ್ಲಿ ತೊಡಗುತ್ತದೆ.

ಮೇಲೆ ಹೇಳಲಾದ ವ್ಯಕ್ತಿಗಳು ಧರ್ಮ, ಸಂಪ್ರದಾಯ, ಮಠ ಮುಂತಾದವುಗಳನ್ನು ಒಂದು ಮೌಲ್ಯವೆಂದು ಭಾವಿಸಿ ಜೀವಿಸುತ್ತಿದ್ದು ಅವುಗಳ ಮೂಲಕ ಮುಕ್ತಿ ಸಾಧ್ಯವೆಂದು ನಂಬುತ್ತಾರೆ. ಆದರೆ ಈ ಜನ ಬದುಕಿರುವುದು ಈ ಆಧುನಿಕ ಸಮಾಜದಲ್ಲಿ, ಇಲ್ಲಿಯ ಮೌಲ್ಯಗಳೇ ಬೇರೆಯ ನೆಲೆಯಲ್ಲಿ ರೂಪುಗೊಂಡಿದ್ದು. ಆಧುನಿಕ ಸಮಾಜವೊಂದು ಆಧ್ಯಾತ್ಮವನ್ನು ಬದುಕುವ ಜನರ ಮೇಲೆ ಬೀರುವ ಪರಿಣಾಮಗಳನ್ನು ಇಲ್ಲಿ ಕಾಣಬಹುದು. ಇಂತಹ ಆಧ್ಯಾತ್ಮ ನಂಬಿಕೆಗಳಿಂದ ದೂರ ಉಳಿದ ಒಂದೇ ಒಂದು ಪಾತ್ರವೆಂದರೆ 'ದಿನಕರ.' ಕಾದಂಬರಿಯ

ಸಾಮಾಜಿಕ ಮುಖವಾಗಿಯೂ ದಿನಕರ ಒಮ್ಮೊಮ್ಮೆ ಇಲ್ಲಿ ಕಾಣುತ್ತಾನೆ.

ಸಾಮಾಜಿಕ ವ್ಯವಸ್ಥೆಗಳಲ್ಲಿ ಒಂದಾದ ಮದುವೆಯೆಂಬ ವ್ಯವಸ್ಥೆಯು ತನ್ನ ರೂಪು ರೇಷೆಗಳಲ್ಲಿ ಹೊಂದುವ ಬದಲಾವಣೆಯನ್ನು ಇಲ್ಲಿ ಕಾಣಬಹುದು. ವಿವಾಹೇತರವಾದ ಸಂಬಂಧಗಳಿಗೂ ಇಲ್ಲಿ ಮಾನ್ಯತೆ ದೊರಕಿದ್ದು ವಿಪರ್ಯಾಸವೆನಿಸುತ್ತದೆ. ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿದ ಈ ಸಂಬಂಧಗಳು ವೈಯಕ್ತಿಕವಾಗಿ ಕೊನೆಗೆ ಸಂತೃಪ್ತವಾದ ಜೀವನವನ್ನು ಪಡೆಯುತ್ತವೆ. ಆದರೆ ಈ ರೀತಿಯ ವಿಷಮ ದಾಂಪತ್ಯ, ವಿವಾಹೇತರ ಸಂಬಂಧಗಳು ಭಾರತೀಯ ಸಮಾಜದಲ್ಲಿ ಏರುಪೇರುನ್ನು ಉಂಟು ಮಾಡುತ್ತವೆ ಎಂಬುದು ಕಾದಂಬರಿ ಸೂಚಿಸುವ ಆಧುನಿಕ ಸಾಮಾಜಿಕ ಸಮಸ್ಯೆಯಾಗಿದೆ.

ಈ ಸಂಬಂಧಗಳ ಗೊಂದಲದಲ್ಲಿ (ಭವದಲ್ಲಿ) ಸಿಲುಕಿದ ವ್ಯಕ್ತಿಗಳು ಅದರಿಂದ ಮುಕ್ತರಾಗಲು ಬೇರೆ ಬೇರೆ ಜೀವನಕ್ರಮವನ್ನು ಅನುಸರಿಸುತ್ತಾರೆ. ಅದರಿಂದಾಗಿ ಸಾಮಾಜಿಕ ಜೀವನದಲ್ಲಿ ದೊಡ್ಡ ಪ್ರಮಾಣದ ಬದಲಾವಣೆಗಳು ಕಂಡು ಬಂದು, ಸಂಪ್ರದಾಯಸ್ಥ ಕುಟುಂಬಗಳು ಈ ಸವಾಲನ್ನು ಎದುರಿಸುವುದು ಕಷ್ಟವಾಗುತ್ತದೆ.

ಸಾಂಪ್ರದಾಯಿಕ ಮೌಲ್ಯಗಳು ಹಾಗು ನವ್ಯ ಸಾಹಿತ್ಯ ಮೌಲ್ಯಗಳೂ ಸೇರಿ ಈ ಕಾದಂಬರಿ ಸೃಷ್ಟಿಯಾಗಿದೆ. ಹಾಗೆಯೇ ಕನ್ನಡ ಸಾಹಿತ್ಯದಲ್ಲಿ ಬಂಡಾಯ ಸಾಹಿತ್ಯದ ೭೦ರ ದಶಕದ ತೀವ್ರತೆಯು ಕಡಿಮೆಯಾದ ಸಂದರ್ಭದಲ್ಲಿ ಈ ಕಾದಂಬರಿ ರಚನೆಯಾಗಿದ್ದು (೧೯೯೪) ಬಂಡಾಯದ ಜನಪರ ಕಾಳಜಿಯು ಈ ಕಾದಂಬರಿಯಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಶಾಸ್ತ್ರಿ, ದಿನಕರ, ನಾರಾಯಣ ತಂತ್ರಿ ಇವರುಗಳು ಪರಸ್ತ್ರೀಯರಿಗೆ ಬೆಳೆಸಿದ ಅನೈತಿಕ ಸಂಬಂಧಗಳ ಬಗ್ಗೆ ಸುತ್ತಲಿನ ಸಮಾಜ ಮುಖವಾಗಿರುವುದು ಸಮಾಜದ ದೌರ್ಬಲ್ಯವನ್ನು ತೋರಿಸುತ್ತದೆ. ಜಲಜ, ವಿಮಲ ಮುಂತಾದ ಪಾತ್ರಗಳು ಸಮಾಜವು ರೂಪಿಸಿಕೊಂಡ ನಿಯಮವನ್ನು ಮೀರುತ್ತವೆ. ಅದರಿಂದ ಅವರ ಜೀವನದಲ್ಲಿ ಯಾವ ಮೇಲ್ಮಟ್ಟದ ಬದಲಾವಣೆಯೂ ಆಗುವುದಿಲ್ಲ. ಬದಲಿಗೆ ನಿಸರ್ಗ ನಿಯಮ ಎಂಬ ಹೆಸರಿನಲ್ಲಿ ಅನೈತಕ ಸಂಬಂಧಗಳಾಗಿ ಉಳಿಯುತ್ತಾರೆ. 'ಭವ'ದ ಪಾತ್ರಗಳು ಅವರವರ ಮನೋಧರ್ಮಕಏಕ ತಕ್ಕಂತೆ ನಡೆದು ಕೊಳ್ಳುತ್ತದೆ. ತಮ್ಮ ಕೊರತೆಗಳನ್ನು ನೀಗಿಸಿಕೊಳ್ಳುವ ಬದಲು ಕೌಟುಂಬಿಕ ಹಾಗು ಸಾಮಾಜಿಕ ವ್ಯವಸ್ಥೆಯಿಂದಲೇ ದೂರಾಗುವುದನ್ನು ಕಾಣಬಹುದು. ಪ್ರಸಾದನ ಸನ್ಯಾಸ ಸ್ವೀಕಾರ ಇದಕ್ಕೊಂದು ಉದಾಹರಣೆಯಾಗಿ ನಿಲ್ಲುತ್ತದೆ.

ಒಟ್ಟಾರೆಯಾಗಿ ಯು. ಆರ್. ಅನಂತಮೂರ್ತಿಯವರ ಐದು ಕಾದಂಬರಿಗಳಲ್ಲಿ ವಿಭಿನ್ನವಾದಕಾದಂಬರಿ ಇದಾಗಿದೆ. ನವ್ಯದ ವ್ಯಕ್ತಿಕೇಂದ್ರಿತ ನೆಲೆ, ಮನುಷ್ಯನ ಅಸ್ತಿತ್ವ ಮೊದಲು ಅನಂತರ ಅವನ ನಂಬಿಕೆಗಳು, ಸಿದ್ಧಾಂತಗಳು ಎನ್ನುವ ಅಸ್ತಿತ್ವವಾದದ ಅಂಶಗಳು ಇಲ್ಲಿ ನೆಲೆಸಿದೆ. ಹಾಗಾಗಿ ಬಂಡಾಯದ ಸಾಮಾಜಿಕ ಸ್ವರೂಪವನ್ನು ಇಲ್ಲಿಯ ಪಾತ್ರಗಳು ಪಡೆಯುವುದಿಲ್ಲ.

## ದಿವ್ಯ

ಯು. ಆರ್. ಅನಂತಮೂರ್ತಿಯವರ ಐದನೇ ಕಾದಂಬರಿಯಾದ 'ದಿವ್ಯ'ದಲ್ಲಿ ಎಲ್ಲ ಪಾತ್ರಗಳ ದೃಷ್ಟಿಯಿಂದಲೂ ಎಲ್ಲರೂ ಸಮಾನರಾಗಬೇಕೆಂಬ ಹಂಬಲ ಇರುವುದನ್ನು ಕಾಣಬಹುದು. ಕಾದಂಬರಿಯ 'ಮೊದಲ ಮಾತು'ವಿನಲ್ಲಿ ಯು. ಆರ್. ಅನಂತಮೂರ್ತಿಯವರೇ ಹೇಳುವಂತೆ " ನಮ್ಮ ಹಳದ ವೈಚಾರಿಕತೆಯನ್ನು ವಿಮರ್ಶೆಗೆ ಗುರಿಪಡಿಸಿ ಅನುಮಾನಿಸುವುದು" ಇದರ ಉದ್ದೇಶ. ಹಿಂದಿನ ಕಾದಂಬರಿಗಳಂತೆಯೇ ಇಲ್ಲಿಯೂ ಮಲೆನಾಡಿನ ಪರಸರ ಸ್ಫೂರ್ತಿಯಾಗಿದೆ. ವೈಯಕ್ತಿಕ ಹಾಗೂ ಸಾಮಾಜಿಕ ಬೆಳವಣಿಗೆ ಇಲ್ಲಿ ಒಂದಕ್ಕೊಂದು ಪೂರಕವಾಗಿ ನಿಂತಿದೆ. ಮಾನವೀಯ ಸಮಾಜ ನಿರ್ಮಾಣ ಎಂಬ ಉದ್ದೇಶಕ್ಕಾಗಿ ಎಲ್ಲ ಪಾತ್ರಗಳೂ ಶ್ರಮಿಸುತ್ತವೆ.

### ದಿವ್ಯ - ಗಾಂಧಿ

ಶ್ರಮ ಜೀವಿಗಳೂ, ಬುದ್ಧಿಜೀವಿಗಳೂ ಒಟ್ಟಾಗಿ ದುಡಿದಾಗ ಒಂದು ಉತ್ತಮ ಸಮಾಜ ನಿರ್ಮಾಣವಾಗಲು ಸಾಧ್ಯ ಎಂಬ ಗಾಂಧೀಜಿಯವರ ನಿಲುವು ಈ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ. ಪ್ರಮುಖ ಪಾತ್ರಗಳಾದ ಗೌರಿ, ಕೇಶವ, ಅಕ್ಕು, ಘನಶ್ಯಾಮ ಇವರುಗಳು ತಾವು ಇರುವ ಹಳ್ಳಿಯನ್ನೇ ತಮ್ಮ ವಿಶ್ವವನ್ನಾಗಿಸಿಕೊಳ್ಳುತ್ತಾರೆ.

ಕಾದಂಬರಿಯಲ್ಲಿ ಬರುವ ಅನೇಕ ಸನ್ನಿವೇಶಗಳು ಇದನ್ನು ಸಮರ್ಥಿಸುತ್ತವೆ. ತನ್ನ ವಿಶಿಷ್ಟ ನಡವಳಿಕೆಯಿಂದ ಮನೆಯವರಿಗೂ, ಊರಿನ ಜನರ ಊಹೆಗೂ ನಿಲುಕದ 'ದೇವಿ'ಯಾದ ಗೌರಿಯು ತನ್ನ ಮಾವನಿಗೆ "ಈ ಕರಿಯನನ್ನು ನಾವು ಯಾಕೆ ಮುಟ್ಟಬಾರದು?" [ಪುಟ-೫೩-ದಿವ್ಯ] ಎಂಬ ಪ್ರಶ್ನೆಯನ್ನು ಹಾಕಿ ಅವನು ತಬ್ಬಿಬ್ಬುಗೊಳ್ಳುವಂತೆ ಮಾಡಿದ್ದಳು. ಕೇಶವ ಶರ್ಮ ತನ್ನ ಜ್ಞಾನವನ್ನೆಲ್ಲಾ ಬಳಸಿಯೂ ಅದಕ್ಕೆ ಉತ್ತರ ನೀಡಲಾರದೆ ಹೋಗುತ್ತಾನೆ. ಅಸ್ಪೃಶ್ಯತೆಗೆ ವಿರೋಧವಾದ ವಿಚಾರಗಳೆಲ್ಲವೂ ಕೇಶವನಿಗೆ ಗೊತ್ತಿದ್ದರೂ ಗಾಂಧೀಜಿಯ ಜೀವನ ಚರಿತ್ರೆಯನ್ನು ಆಕರ್ಷಕವಾದ ಹರಿಕಥೆಯಾಗಿ ಮಾರ್ಪಡಿಸಿ ಸಾಹುಕಾರ ಮಂಜಯ್ಯನ ಮುಂದೆ ಹೇಳಿದ್ದರೂ ಉತ್ತರಿಸುವಲ್ಲಿ ವಿಫಲನಾಗುತ್ತಾನೆ. ಗೌರಿಯ ವೈಚಾರಿಕವಾದ ಪ್ರಶ್ನೆ, ವೈಚಾರಿಕ ಮಟ್ಟವನ್ನು ಮೀರಿ ಮಾನವೀಯತೆಯನ್ನು ಪ್ರತಿಪಾದಿಸುತ್ತದೆ.

ಮಂಜಯ್ಯ ಸಂಪ್ರದಾಯವಾದಿಯಾದರೂ ಗಾಂಧಿಯನ್ನು ಮೆಚ್ಚುತ್ತಾನೆ. ಅವರೂ ಕೇಶವನಿಗೆ ಇದೇ ಪ್ರಶ್ನೆಯನ್ನೇ ಕೇಳುತ್ತಾರೆ. 'ಅಸ್ಪೃಶ್ಯತೆಯನ್ನು ವೇದ ಎತ್ತಿ ಹಿಡಿಯುತ್ತದೆಯೆ?" [ಪುಟ ೫೩-ದಿವ್ಯ] ಎಂಬ ಪ್ರಶ್ನೆಗೆ ಕೇಶವ 'ಸ್ಮೃತಿಯಲ್ಲಿ ಸಮರ್ಥನೆ ಇದ್ದೀತು. ಶ್ರುತಿಯಲ್ಲಿ ಇಲ್ಲ. ಸ್ಮೃತಿ ಕಾಲಾನುಸಾರ ಬದಲಾಗುವಂಥದ್ದು. ಗಾಂಧೀಜಿ ನಮ್ಮ ಕಾಲದ ಸ್ಮೃತಿಕಾರರಿಬಹುದು' ಎಂದು ಹೇಳುತ್ತಾನೆ. [ಪುಟ-೫೩-

ದಿವ್ಯ] ಇಲ್ಲಿಯೂ ಕೇಶವನಾಗಲೀ, ಗೌರಿಯಾಗಲೀ, ಮಂಜಯ್ಯನಾಗಲೀ ಅಸ್ಪೃಶ್ಯತೆಯನ್ನು ಮೀರುವುದಿಲ್ಲ. ಮುಂದೆ ಇವರೇ ಸಮಾನತೆಗಾಗಿ ಶ್ರಮಿಸುವುದನ್ನು ಕಾಣಬಹುದು. ಕರಿಯನ ಬಗ್ಗೆ ಈ ಮೆಚ್ಚುಗೆ ಮುಂದುವರಿಯುವುದನ್ನು ಗಮನಿಸಬಹುದು. ಆದರೆ ಅವನನ್ನು ಕೊನೆಯವರೆಗೂ ಅಸ್ಪೃಶ್ಯನ್ನಾಗಿಯೇ ಉಳಿಸುವುದು ಕಾದಂಬರಿಯ ವಿಪರ್ಯಾಸ. ಆದರೆ ಕರಿಯನೂ ಗೌರಿಯೂ ಆಡುವ ಮಾತುಗಳಲ್ಲಿ ಕರಿಯನಿಗೆ ಈ ಅಸ್ಪೃಶ್ಯತೆಯ ಬಗ್ಗೆ ಅಸಮಾಧಾನವೂ, ಅದು ನಿಜವಾಗಿ ಆಚರಣೆಯಲ್ಲಿ ಇಲ್ಲ ಎಂಬುದೂ ಸ್ಪಷ್ಟವಾಗುತ್ತದೆ. ಸಾಹುಕಾರರು ಬಾವುಟ ಹಾರಿಸಿ ಆಡುವ ಗಾಂಧೀವಾದದ ಮಾತುಗಳು ಕರಿಯನಿಗೆ ಬೂಟಾಟಿಕೆಯಾಗಿ ತೋರುತ್ತದೆ. [ಪುಟ-೫೯-ದಿವ್ಯ] ತನ್ನ ಅಸಮಾಧಾನವನ್ನು ಗೌರಿಯ ಮುಂದೆ ತೋಡಿಕೊಳ್ಳುತ್ತಾನೆ. ಅವರಿಬ್ಬರ ನಡುವಿನ ಸಲುಗೆಯಲ್ಲಿ ಕರಿಯ ಗೌರಿಯನ್ನು ಮೆಚ್ಚುತ್ತಾನೆ. [ಪುಟ-೬೧-ದಿವ್ಯ] ಆದರೂ ಗೌರಿ-ಕರಿಯರ ನಡುವೆ ಒಂದು ಅಂತರ ಉಳಿದು ಹೋಗುತ್ತದೆ. 'ನೀವು ಹೊಲೆಯರಲ್ಲ, ಹರಿಜನರು ಅಂತ ಗಾಂಧಿ ಹೇಳೋದು ನಿನಗೆ ಗೊತ್ತ? ಎಂದು ಗೌರಿ ಕರಿಯನಿಗೆ ಹೇಳಿದರೂ 'ಚೋಮನ ದುಡಿ'ಯ ಕಥೆಯನ್ನು ಹೇಳಲು ಹಿಂಜರಿದಿದ್ದಳು. [ಪುಟ-೬೦-ದಿವ್ಯ] ಕೇವಲ ಕಾಮ ಸಂಬಂಧವಾಗಿ ಮಾತ್ರ ಉಳಿದು ಅಸ್ಪೃಶ್ಯತೆಯ ನಿವಾರಣೆಯ ಒಂದು ಸುಳಿವೂ ಅದರಲ್ಲಿ ಕಾಣುವುದಿಲ್ಲ.

ಇಲ್ಲಿ ಗೌರಿ ಸ್ವಕೀಯ ಪ್ರಜ್ಞೆಯಿಂದ ಮೂಡಿದ ಪಾತ್ರವಾಗಿದೆ. ಸಂಪ್ರದಾಯಸ್ಥ ಕುಟುಂಬದಲ್ಲಿ ಬೆಳೆದರೂ ಅದನ್ನು ಮೀರುವ, ಸಾಮಾಜಿಕವಾಗಿ ಆಲೋಚಿಸುವ ಗುಣ ಅವಳಿಗೆದೆ. ಅವಳಿಗೆ ಹೊರಗಿನ ಎಂದರೆ ಬೇರೆ ಭಾಷೆ, ದೇಶ ಅಥವಾ ಪಾಶ್ಚಾತ್ಯ ಮಾದರಿಯ ಯಾವುದೇ ಪ್ರಭಾವವೂ ಆಗಿಲ್ಲ. ಆದರೆ ತನ್ನ ಆತ್ಮಪ್ರಜ್ಞೆಯಿಂದಲೂ, ಸ್ವಕೀಯ ಪ್ರಜ್ಞೆಯಿಂದಲೂ ವರ್ತಿಸುವ ರೀತಿ ಬಂಡಾಯವಾಗಿದೆ.

ಗಾಂಧಿಗೆ ಪ್ರಿಯವಾದ ಉಪನಿಷತ್ತಿನ ಅರ್ಥವನ್ನು ಮಂಜಯ್ಯ ಕೇಳಿ ತಿಳಿಯುವ ಹಂಬಲ ವ್ಯಕ್ತವಾದರೂ ಅದನ್ನೆಲ್ಲಾ ಆಚರಣೆಗೆ ತರಬೇಕೆಂದು ಮನಃಪೂರ್ವಕವಾಗಿ ಯತ್ನಿಸುವುದಿಲ್ಲ. [ಪುಟ-೬೫-ದಿವ್ಯ] ಹಿಂದೊಮ್ಮೆ ಗಾಂಧಿ ಇವರ ಊರಿಗೆ ಬಂದಾಗ ಹರಿಜನಕೇರಿಗೆ ಹೋಗಿ ಬಂದ ಮಂಜಯ್ಯ ಇತರ ಬ್ರಾಹ್ಮಣರಂತೆ ಪಂಚಗವ್ಯ ಶುದ್ಧಿ ಮಾಡಿಕೊಳ್ಳುವುದಲಿಲ. ತನ್ನ ತಂದೆಯನ್ನು ಎದುರಿಸುತ್ತಾನೆ. ಆದರೆ ಗಾಂಧಿಯನ್ನು ವಿಷ್ಣುವಿನ ಅವತಾರ ಎಂದು ತಿಳಿಯುತ್ತಾರೆ. ಬೆಂಗಳೂರು, ಶಿವಮೊಗ್ಗದಲ್ಲಿ ಹೊಸ ವ್ಯಾಪಾರವನ್ನು ಪ್ರಾರಂಭಿಸಿದ್ದಾರೆ. ಒಟ್ಟಿನಲ್ಲಿ ಮಂಜಯ್ಯನವರ 'ಖಾಸಗಿ ತೆವಲುಗಳಿಗೂ ಅವರ ಸಂಪ್ರದಾಯ ವಿರೋಧದ ತಾತ್ವಿಕತೆಗೂ ಹೀಗೆಯೇ ಅನುಕೂಲದ ಸಂಬಂಧವಿತ್ತು.' [ಪುಟ-೯೧-ದಿವ್ಯ]

ಕಾದಂಬರಿಯ ಮತ್ತೊಂದು ಪ್ರಮುಖವಾದ ಅಂಶವೆಂದರೆ ದುರುಗಪ್ಪ ಮೇಷ್ಟ್ರು ಹಾಗೂ ಗಣಪಯ್ಯನ ವಿಧವೆ ಮಗಳಾದ ಸರಸ್ವತಿಯ ನಡುವಿನ ಸಂಬಂಧ. ಅವರಿಬ್ಬರೂ ಊರುಬಿಟ್ಟು ಹೋಗಿ ವಿವಾಹವಾಗಲು ಸಿದ್ಧರಾಗುತ್ತಾರೆ. ಆದರೆ ಗಣಪಯ್ಯ ಅವನನ್ನು ಕೊಲೆ ಮಾಡಿಸುತ್ತಾನೆ. ಈ ಪೋಲಿಸ್ ಕೇಸಿನಲ್ಲಿ ಮಂಜಯ್ಯ ಗಣಪಯ್ಯನ ಪರ ಸುಳ್ಳುಸಾಕ್ಷಿ ಹೇಳಬೇಕಾಗುತ್ತದೆ.

ಮಂಜಯ್ಯನ ಮಗಳಾದ ವಿಮಲ ತನ್ನ ಕಾರ್ ಡ್ರೈವರ್‌ನನ್ನೇ ಮೋಹಿಸಿ ಮಗುವನ್ನು ಪಡೆದರೂ ಅವರಿಬ್ಬರ ವಿವಾಹದ ಬಗ್ಗೆ ಮಂಜಯ್ಯ ತನ್ನ ಸಮ್ಮತಿಯನ್ನು ಮೊದಮೊದಲು ನೀಡುವುದಿಲ್ಲ. ಸಾಧಾರಣ ಡ್ರೈವರ್ ಎಂಬ ಕಾರಣವೂ ಅದರಲ್ಲಿ ಕಂಡು ಬರುತ್ತದೆ.

ಇಂತಹ ಹಲವು ಘಟನೆಗಳನ್ನು ಗಮನಿಸುವುದಾದರೆ ಮಂಜಯ್ಯನ ಗಾಂಧೀವಾದವಾಗಲೀ, ಅಥವಾ ಗಾಂಧೀಜಿಯಿಂದ ಸ್ವತಃ ಭಾಷಣ ಕೇಳಿ ತಿಳಿದ ಊರಿನ ಜನರಿಗಾಗಲೀ ಕರಿಯ-ಜಲಜ, ಮಿಂಗೇಲಿ-ವಿಮಲ, ದುರುಗಪ್ಪ-ಸರಸ್ವತಿ ಇವರುಗಳ ನಡುವಿನ ಸಂಬಂಧದ ಬಗ್ಗೆ ಸಹಮತವಿರುವುದಿಲ್ಲ.

**ದಿವ್ಯ - ಲೋಹಿಯಾ**

ಕಾದಂಬರಿಯ ತುಂಬೆಲ್ಲಾ ಗಾಂಧೀವಾದ, ಸಮಾಜವಾದದ ವಿಚಾರಗಳು ಅಲ್ಲಲ್ಲಿ ಕಂಡುಬಂದರೂ, ಪ್ರಮುಖವಾಗಿ ಕಾದಂಬರಿಯ ಎರಡು, ಮೂರನೆಯ ಭಾಗದಲ್ಲಿ ಪ್ರಮುಖ ಪಾತ್ರಗಳಾದ ಮಂಜಯ್ಯ, ಅವರ ಮಗನಾದ ಘನಶ್ಯಾಮ, ಕೇಶವನ ಗೆಳೆಯ ಪುಟ್ಟೇಗೌಡ ಇವರುಗಳು ತಮ್ಮ ಸುತ್ತಲಿನ ಸಮಾಜದಲ್ಲಿ ಸಮಾನತೆಯನ್ನು ತರಲು ಪ್ರಯತ್ನಿಸುತ್ತಾರೆ.

ಪುಟ್ಟೇಗೌಡನ ಮೂಲಕ ಇಡೀ ಕಾದಂಬರಿಯ ಪಾತ್ರಗಳನ್ನೆಲ್ಲಾ ಕೆದಕುತ್ತಾ ಹೋಗಲಾಗಿದೆ. ಗೇಣಿದಾರರ ಸಂಘದ ಪರವಾಗಿರುವ ಪುಟ್ಟೇಗೌಡ ತಾನು ಮಂಜಯ್ಯನಿಗೆ ಕೊಡಬೇಕಾದ ಗೇಣಿಯನ್ನು ಎಂದೂ ಉಳಿಸಿಕೊಂಡವನಲ್ಲ. ಮಂಜಯ್ಯ "ಎಲ್ಲ ಗೇಣಿದಾರರೂ ನಿನ್ನ ಹಾಗಿದ್ದರೆ ಸಮಸ್ಯೆಯೇ ಇರುತ್ತಿರಲಿಲ್ಲ" ಎಂದರೆ ಪುಟ್ಟೇಗೌಡ "ಎಲ್ಲ ಜಮೀನುದಾರರೂ ನಿಮ್ಮ ಹಾಗಿದ್ದರೆ ಈ ಸಮಾಜದಲ್ಲಿ ಪ್ರಗತಿಯೇ ಆಗುತ್ತಿರಲಿಲ್ಲ"[23] ಎಂದು ನಗುತ್ತಾನೆ. ಪುಟ್ಟೇಗೌಡನ ಮಾತುಗಳಲ್ಲಿ ಮಂಜಯ್ಯನನ್ನು ಟೀಕಿಸಿರುವುದನ್ನು ಕಾಣಬಹುದು. ಪುಟ್ಟೇಗೌಡ ಘರ್ಷಣೆಯಿಂದ ಮಾತ್ರ ಸಮಾಜ ಪರಿವರ್ತನೆ ಆಗುತ್ತದೆಂದು ನಂಬಿದಾತ. ಚುನಾವಣೆಗಳಲ್ಲಿ ಸೋಷಿಯಲಿಸ್ಟ್ ಪಕ್ಷಕ್ಕೆ ಬೆಂಬಲಿಸುತ್ತಾನೆ. ಮಂಜಯ್ಯನು ಗಣಪಯ್ಯನನ್ನು ಬೆಂಬಲಿಸಿದ್ದನ್ನು ವಿರೋಧಿಸುತ್ತಾನೆ. ಗಣಪಯ್ಯನ ಹೆಂಡತಿ ಯಮುನಮ್ಮ ತಮ್ಮ ಮಗಳ ಪರವಾಗಿ ನಿಂತದ್ದನ್ನು ಆತ ಕ್ರಾಂತಿ ಎಂದು ಹೊಗಳುತ್ತಾನೆ. ಸರಸ್ವತಿ, ದುರುಗಪ್ಪನು ತೀರಿಹೋದ ಮೇಲೆ ತಮ್ಮ ಮಗುವನ್ನು ಅವನ ಅಪ್ಪನ ಎಂದೆರ ತನ್ನ ಮಾವನ ಬಳಿ ಕರೆದುಕೊಂಡು ಹೋಗುವುದನ್ನು ಪುಟ್ಟೇಗೌಡ ಮೆಚ್ಚಿ ಮಾತಾಡುತ್ತಾನೆ. ಇಂತಹ ಸಮಾಜವಾದಿಯಾದ ಪುಟ್ಟೇಗೌಡನ ವಿಚಾರಗಳಿಗೂ ಕಾದಂಬರಿಯ ಮತ್ತೊಂದು ಪಾತ್ರವಾದ ಕೃಷ್ಣಶಾಸ್ತ್ರಿಗಳ ವಿಚಾರಗಳಿಗೂ ಕೆಲ ಹೋಲಿಕೆ ಇರುವುದನ್ನು ಕಾಣಬಹುದು. ಸಂಪ್ರದಾಯವಾದಿಯಾದ ಕೃಷ್ಣಶಾಸ್ತ್ರಿಗಳು ತಮ್ಮ ಪ್ರಾಂತ್ಯದಲ್ಲಿ ಅನ್ನಪೂರ್ಣೆಯನ್ನು ದರ್ಶನ ಮಾಡಲು ಬರುವವರು ತುಂಗೆಯನ್ನು ಈಜಿ ಬರಲಿ ಸೇತುವೆಯ ಅಗತ್ಯವಿಲ್ಲ, ನವದುರ್ಗೆಯ ದರ್ಶನಕ್ಕೆ ವಿದ್ಯುತ್ ದೀಪವಾಗಲೀ, ಟಾರ್ಚ್ ಆಗಲೀ ತರಕೂಡದು, ಅಮ್ಮನವರ ಪ್ರಸಾದವಲ್ಲದೆ ಅನ್ನವಿಕ್ರಯದ ಹೋಟೆಲ್‌ಗಳು ಇರಬಾರದೆಂದು ವಾದಿಸಿ ತಮ್ಮ ಪ್ರಾಂತ್ಯವನ್ನು

ಆಧುನಿಕವಾಗದಂತೆ ನೋಡಿಕೊಂಡಿದ್ದಾರೆ.

ಅಣೆಕಟ್ಟು ಕಟ್ಟಿದರೆ ಭೂ ಕಂಪ, ವಿದ್ಯುತ್ ಉತ್ಪಾದನೆಯಿಂದ ಪರಿಸರ ಮಾಲಿನ್ಯ, ಕಾಫಿ ಬೆಳೆಯಿಂದ ಕಾಡಿನ ನಾಶ ಎಂದು ವಾದಿಸುತ್ತಾರೆ.

ಈ ವಾದವನ್ನು ಪುಟ್ಟೇಗೌಡನೂ ಸಮರ್ಥಿಸುತ್ತಾನೆ. ಅವನ ಪ್ರಕಾರ ಇದರಲ್ಲಿ ದೇಸೀಯತೆ ಇದ್ದು ನೆಹರೂ ಪ್ರಣೀತವಾದ ಐರೋಪ್ಯ ಆಧುನಿಕತೆಯ ವಿರೋಧವೂ ಗಾಂಧಿ ಪ್ರಣೀತ ದೇಸೀವಾದವೂ ಅದರಲ್ಲಿ ಇರುವುದೆಂದು ಪುಟ್ಟೇಗೌಡನ ವಾದ. ಹಾಗಾಗಿಯೇ ಶಾಸ್ತ್ರಿಗಳನ್ನು ಅವನು ಬೆಂಬಲಿಸುತ್ತಾನೆ.

ಅವರಿಬ್ಬರೂ ಒಟ್ಟುಗೂಡಿ ಘನಶ್ಯಾಮನ ಐರೋಪ್ಯ ಮಾದರಿಯ ಅಭಿವೃದ್ಧಿಯನ್ನು ವಿರೋಧಿಸುತ್ತಾನೆ. ಅಣೆಕಟ್ಟು ಬೇಕೇ ಬೇಕೆಂದು ವಾದಿಸುವವನು ಯಾವನೋ ಕಂಟ್ರಾಕ್ಟರನೇ ಇರಬೇಕೆಂದೂ, ಅದರಿಂದ ಬಡವರಿಗೆ ಲಾಭ ಇದೆಯೇ ಎಂದು ಪ್ರಶ್ನಿಸುತ್ತಾನೆ.

ಪುಟ್ಟೇಗೌಡನ ಮಾತುಗಳಲ್ಲಿ ಸಮಾಜ ಸುಧಾರಣೆ ಯಾವುದೋ ಒಂದು ವರ್ಗ ಅಥವಾ ಒಂದು ಪ್ರದೇಶದಲ್ಲಿ ಆಗುವಂತಹದ್ದಲ್ಲ. ಎಲ್ಲಾ ವರ್ಗಗಳಿಗೂ ಅದು ತಲುಪಬೇಕು. ಹಾಗೆಯೇ ಅಣೆಕಟ್ಟು, ಕಾಫಿ ಬೆಳೆ ಖನಿಜ ಶೋಧನೆ, ಆಸ್ಪತ್ರೆ, ಇವುಗಳಿಂದ ಮಾತ್ರ ಸುಧಾರಣೆ ಸಾಧ್ಯವಿಲ್ಲ ಎಂದು ವಾದಿಸುತ್ತಾನೆ.

ಘನಶ್ಯಾಮನ ವಿಚಾರಗಳು ಹೆಚ್ಚು ಕಡಿಮೆ ಇದೇ ಆಗಿದೆ. ತಂದೆ ಮಂಜಯ್ಯ ತಮ್ಮ ವಿಚಾರಗಳಲ್ಲಿ ಗಾಂಧಿಯನ್ನು ಅಳವಡಿಸಿಕೊಂಡಿದ್ದರೆ ಘನಶ್ಯಾಮ ಅದನ್ನು ನೇರವಾಗಿ ತನ್ನ ಜೀವನದಲ್ಲಿ ಆಚರಣೆಗೆ ತರುತ್ತಾನೆ. ಅಸ್ಪೃಶ್ಯತೆ, ಸಾಮಾಜಿಕ ಅಸಮಾನತೆ ಇವುಗಳ ವಿರುದ್ಧ ಘನಶ್ಯಾಮ ಮುನ್ನುಗ್ಗುತ್ತಾನೆ. ತನ್ನ ವಿದೇಶೀ ವಿದ್ಯಾಭ್ಯಾಸದ ಎಲ್ಲ ಲಾಭವನ್ನು ತನ್ನ ಹಳ್ಳಿಯ ಏಳಿಗೆಗಾಗಿ ಬಳಸಿಕೊಳ್ಳುವ ಹಂಬಲ ಅವನದು. ಮಂಜಯ್ಯನೇ ಮಿಂಗೇಲಿ-ವಿಮಲರ ಸಂಬಂಧವನ್ನು ಒಂದು ಹಂತದವರೆಗೆ ಒಪ್ಪಿಕೊಂಡಿರುತ್ತಾನೆ. ಅದರ ಮುಂದುವರಿಕೆಯನ್ನು ಘನಶ್ಯಾಮನಲ್ಲಿ ಕಾಣಬಹುದು. ಘನಶ್ಯಾಮನ ನಡವಳಿಕೆಯಲ್ಲಿ ವೈಯಕ್ತಿಕ ಹಿತಾಸಕ್ತಿ ಇರುವಂತೆಯೇ ಸಾಮಾಜಿಕ ಕಾಳಜಿಯೂ ಇದೆ. ಸ್ವಂತ ತಂಗಿ ವಿಮಲ ಹಾಗೂ ಚಿಕ್ಕಮ್ಮನ ಮಗಳಾದ ವಿನೋದಿನಿಯರಿಗೆ ಒಂದೇ ತೆರನಾದ ಪ್ರೀತಿಯನ್ನು ತೋರುತ್ತಾನೆ. ತಂದೆ ಕೊನೆಗಾಲದಲ್ಲಿ ಜಮೀನುದಾರರ ಪರವಾಗಿದ್ದರೂ ತಾನು ಗೇಣಿದಾರರಿಗೆ ವಿಶೇಷ ಸೌಲಭ್ಯ ಒದಗಿಸಿಕೊಡುತ್ತಾನೆ. ಉಳುವವನೇ ಒಡೆಯ. ಅದರಿಂದ ಬರುವ ಗೇಣಿಯಿಂದ ಒಂದು ಆಸ್ಪತ್ರೆ, ಒಂದು ಶಾಲೆ ತೆರೆಯುವ ಆಶಯವನ್ನು ವ್ಯಕ್ತಪಡಿಸುತ್ತಾನೆ. ಭೂವರಾಹನ ಪೂಜೆಗೆ ವಿಶೇಷವಾದ ಆಯಾಮ ನೀಡುತ್ತಾನೆ. ವಿಮಲ-ಮಿಂಗೇಲಿಯನ್ನು ಮನೆಯವರೆಂದೇ ಕಾಣುವ ಔದಾರ್ಯ, ಸಮಾನತೆಯನ್ನು ಘನಶ್ಯಾಮ ಸಾಧಿಸುತ್ತಾನೆ.

ವಿನೋದಿನಿಯು, ಆಧುನಿಕತೆಯ ಒತ್ತಡದಿಂದ ಉಂಟಾದ ಘನಶ್ಯಾಮನ ಐರೋಪ್ಯ ಮಾದರಿಯ ಪ್ರಗತಿಯನ್ನು ಪ್ರಶ್ನಿಸುತ್ತಾಳೆ. ಗೌರಿ ಹಾಗೂ ಅಕ್ಕುವಿನ ಮಾನವೀಯತೆಯ ನಡವಳಿಕೆಯನ್ನು ಕ್ರಾಂತಿಯೆಂದೇ ಬಗೆಯುತ್ತಾಳೆ. ಅಕ್ಕು, ಕೇಶವ ಇವರಾದರೂ ತಮ್ಮ ಇತಿಮಿತಿಗಳಲ್ಲಿ ವಿಮಲೆಯ ಅನಾಥ ಮಗುವೊಂದನ್ನು ಸಾಕುವ ಸಾಹಸಕ್ಕೆ ಕೈ ಹಾಕುವುದು ಆ ಪರಿಸರದಲ್ಲಿ ಒಂದು ಸವಾಲೇ ಸರಿ. ಕೇಶವ ವಿನೋದಿನಿಯನ್ನು ಬಯಸುವುದೂ ಅವರಿಬ್ಬರ ಮದುವೆಗೆ ಅಕ್ಕು ಸಮ್ಮತಿಸುವುದು ಆ ಸಮಾಜದಲ್ಲಿ ನಿಜಕ್ಕೂ ದೊಡ್ಡ ಬದಲಾವಣೆಯೇ. ಏಕೆಂದರೆ ಕಾದಂಬರಿಯ ಪ್ರಾರಂಭದಿಂದಲೂ ಕೇಶವಭಟ್ಟನ ಮನೆಯ ಪರಿಸರ ಸಂಪ್ರದಾಯ ವಾದಿಗಳ ಮನೆಯಾಗಿದ್ದು ಇದ್ದಕ್ಕಿದ್ದಂತೆ ಬರುವ ಹೊಸ ವ್ಯಕ್ತಿಗಳಿಗೆ, ಸನ್ನಿವೇಶಗಳಿಗೆ ಅದು ತನ್ನನ್ನು ಒಡ್ಡಿಕೊಳ್ಳುವ ರೀತಿ ಆಶ್ಚರ್ಯವನ್ನು ತರುತ್ತದೆ.

ಘನಶ್ಯಾಮನು ಮಿಂಗೇಲಿ-ವಿಮಲರ ಸಂಬಂಧವನ್ನು ಒಪ್ಪಿಕೊಂಡಷ್ಟು ಸುಲಭವಾಗಿ ಅಕ್ಕುವು ವಿನೋದಿನಿ-ಕೇಶವ ಸಂಬಂಧವನ್ನು ಒಪ್ಪಿಕೊಳ್ಳಲು ಅವಕಾಶವಿರಲಿಲ್ಲ. ಘನಶ್ಯಾಮನಿಗೆ ವೈಚಾರಿಕತೆಯ ಬೆಂಬಲವೂ, ಸಾಮಾಜಿಕವಾಗಿ ಶ್ರೀಮಂತಿಕೆಯ ಸ್ಥಾನಮಾನಗಳೂ ಇದ್ದು ಅವನ ನಡವಳಿಕೆಗಳು ಹೊಸದೆನಿಸುವುದಿಲ್ಲ. ಆದರೆ ಅಕ್ಕು ಹಾಗೂ ಕೇಶವನಿಗೆ ಹೊರಗಿನ ವೈಚಾರಿಕತೆಯ ಬೆಂಬಲವಿಲ್ಲದೆ ತಮ್ಮ ವೈದಿಕ ಆಚರಣೆಗಳನ್ನೂ ಮೀರಿ ಹೀಗೊಂದು ಹೊಸ ಸಂಬಂಧಕ್ಕೆ, ಹೊಸ ವೃತ್ತಿಗೆ ತೆರೆದುಕೊಳ್ಳುವುದು ಆ ಕಾಲಘಟ್ಟದಲ್ಲಿ ಮುಖ್ಯವೆನಿಸುತ್ತದೆ. ಘನಶ್ಯಾಮನ ವೈಚಾರಿಕತೆಯ ನಿಲುವುಗಳು. ಇತರರ ನಡವಳಿಕೆಯಾಗಿ ಕಂಡು ಬರುತ್ತದೆ. ರೈತ ಪರವಾದ ಅವನ ವಾದಕ್ಕೆ ಜನ ಸ್ಪಂದಿಸುತ್ತಾರೆ.

ಘನಶ್ಯಾಮ, ಪುಟ್ಟೇಗೌಡ, ಮಂಜಯ್ಯ, ಗೌರಿ, ಅಕ್ಕು ಇವರುಗಳನ್ನು ನೇರವಾಗಿ ಪ್ರತಿರೋಧಿಸುವ ಅಥವಾ ಸಮ್ಮತಿಸುವ ಗುಂಪು ಅಥವಾ ಸಮಾಜ ನೇರವಾಗಿ ಕಾದಂಬರಿಯಲ್ಲಿ ಕಂಡು ಬಂದಿಲ್ಲವಾದರೂ ಅವರೆಲ್ಲರ ಚಟುವಟಿಕೆಯ ಮುಖ್ಯ ಭೂಮಿಕೆ ಸಮಾಜವೇ ಆಗಿದೆ. ಘನಶ್ಯಾಮ ಪುಟ್ಟೇಗೌಡ ಮುಂತಾದವರನ್ನು ಸಮಾಜ ಸುಧಾರಕರೆಂದು ಗುರುತಿಸಿದಲ್ಲಿ ಅವರಿಗೆ ಬೆಂಬಲವಾಗಿ ಸಮಾಜ ಇರುವುದನ್ನು ಕಾದಂಬರಿ ಅಪ್ರತ್ಯಕ್ಷವಾಗಿ ಧ್ವನಿಸುತ್ತದೆ

ಕಾದಂಬರಿಯ ಕೇಂದ್ರ ಪಾತ್ರವಾದ ಗೌರಿಯ ದೈವೀಕ ಎನಿಸಿಕೊಳ್ಳುವಂತ ವಿವರಗಳಿಂದಾಗಿ ಕಾದಂಬರಿಗೊಂದು ಸೊಗಸು ಬಂದಿದೆ. ಕಾದಂಬರಿಯ ಮೂರು ಘಟ್ಟದಲ್ಲಿಯೂ ಇದ್ದು ಯಾವ ವಾದವನ್ನೂ ಯಾವ ಕ್ರಾಂತಿಯನ್ನೂ ಬಯಸದೇ ಉಳಿಯುತ್ತಾಳೆ. ಕಾದಂಬರಿಯ ಪ್ರಾರಂಭದಲ್ಲೇ ಕರಿಯನ ಬಗೆಗಿನ ಸಹಾನುಭೂತಿ ವ್ಯಕ್ತಪಡಿಸುತ್ತಾಳೆ. ವಿಮಲಳ ತೊಂದರೆಗಳಿಗೆ ಕಾರಣ ಅವಳ ಸಂಪತ್ತು. ಅದನ್ನು ಪರಿಗಣಿಸದೆ ಮಿಂಗೇಲಿಗೆ ಸಲ್ಲಬೇಕಾದ ಸ್ಥಾನಮಾನಗಳನ್ನು ನೀಡಬೇಕೆಂದು ಗೌರಿಯ ಆಶಯ. ಸಾಹುಕಾರ ಮಂಜಯ್ಯನವರ ಕಾಯಿಲೆಯ ದಿನಗಳಲ್ಲಿ ಅವರ ಎರಡನೆಯ ಸಂಸಾರವನ್ನು ಕರೆಸುವ ಧೈರ್ಯವನ್ನು ಗೌರಿ ಮಾಡುತ್ತಾಳೆ. ಅವರಿಗೂ ಆ ಮನೆಯಲ್ಲಿ ಗೌರವಯುತ ಸ್ಥಾನ ದೊರಕುವಂತೆ ಮಾಡುತ್ತಾಳೆ. ಘನಶ್ಯಾಮನು ಗೋಡೆಯ

ಅಲಂಕಾರವಾಗಿರಲೆಂದು ಭೂವರಾಹನ ವಿಗ್ರಹವನ್ನು ಇಟ್ಟಿದ್ದುದನ್ನು ಗೌರಿ ನಿರಾಕರಿಸುತ್ತಾಳೆ. ಅಕ್ಕುವಿಗೂ, ವಿಮಲಳಿಗೂ, ಕೇಶವನಿಗೂ ಘನಶ್ಯಾಮನಿಗೂ ಪ್ರೇರಕ ಶಕ್ತಿಯಾಗಿ ಉಳಿಯುತ್ತಾಳೆ. ಭೂವರಾಹನ ಪೂಜೆ ತಪ್ಪಿದ ಕೇಶವ ಭಟ್ಟನೂ, ದುರುಗಪ್ಪನ್ನು ಕಳೆದುಕೊಂಡ ಸರಸ್ವತಿಯೂ ಈಗ ಟ್ರಸ್ಟಿನ ಕೆಲಸ ಕಾರ್ಯದಲ್ಲಿ ನಿರತರಾಗಿದ್ದಾರೆ. ಕೇಶವನಿಗೆ ಲೆಕ್ಕ ಪತ್ರ ನೋಡಿಕೊಳ್ಳುವ ಕೆಲಸವೇ ಹೆಚ್ಚಾಗುತ್ತದೆ. ಆ ಮೂಲ ಸಮಾಜ ಸೇವೆಗೆ ತೊಡಗುತ್ತಾನೆ. ಇನ್ನು ಸರಸ್ವತಿ ಜೈಲಿನಲ್ಲಿರುವ ತನ್ನ ತಂದೆ ಗಳಿಸಿದ್ದ ಹಣದಲ್ಲಿ ಒಂದು ಲಕ್ಷ ರೂ. ಗಳನ್ನು ದುರುಗಪ್ಪನ ಹೆಸರಿನಲ್ಲಿ ಆಸ್ಪತ್ರೆ ನಿರ್ಮಿಸಲು ಕೊಡುತ್ತಾಳೆ. ವಿನೋದಿನಿ ತನ್ನ ಪಾಲಿನ ಒಡವೆಗಳನ್ನೆಲ್ಲಾ ಈ ಕಾರ್ಯಕ್ಕಾಗಿಯೇ ವಿನಿಯೋಗಿಸುತ್ತಾಳೆ. ಹೀಗೆ ಇದೆಲ್ಲ ಸಮಾಜೋದ್ಧಾರದ ಕಾರ್ಯಕ್ರಮಗಳಿಂದ ಘನಶ್ಯಾಮನ ಕೀರ್ತಿಯೂ ಹೆಚ್ಚಿದೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಚಾರವೆಂದರೆ ವಿಮಲ-ಮಿಂಗೇಲಿ, ಘನಶ್ಯಾಮ-ಗೌರಿ, ಕೇಶವಭಟ್ಟ-ವಿನೋದಿನಿಯರ ಮದುವೆಯು ನಡೆಯುವಷ್ಟು ಸುಲಭವಾಗಿ ದುರುಗಪ್ಪ -ಸರಸ್ವತಿಯರ ಮದುವೆ ನಡೆಯುವುದಿಲ್ಲ. ಅವರಿಬ್ಬರೂ ಬೇರೆ ಬೇರೆ ಜಾತಿಯವರೂ ವರ್ಗದವರೂ ಆದ ಕಾರಣ ದುರುಗಪ್ಪನ ಕೊಲೆಯೇ ನಡೆಯುತ್ತದೆ. ಆದರೆ ಆರ್ಥಿಕವಾಗಿ ಸುಭದ್ರರಾದ ವಿಮಲಳ ಮನೆಯಲ್ಲಿ ಮಿಂಗೇಲಿ(ಮೈಕೇಲ್) ಬೇರೆ ಧರ್ಮದವನಾದರೂ ಅವನನ್ನು ಒಪ್ಪಿಕೊಂಡು ಮದುವೆ ಮಾಡುತ್ತಾರೆ. ಕರಿಯ-ಜಲಜರ ಸಂಬಂಧದಲ್ಲಿ ಜಾತಿ, ವರ್ಗ ಯಾವುದಕ್ಕೂ ಅಲ್ಲದೆ ಅನೈತಿಕ ಎಂಬ ಕಾರಣಕ್ಕಾಗಿ ಕರಿಯ ಕೊಲೆಯಾಗುತ್ತಾನೆ.

ಹೀಗೆ ಸಮಾನತೆ ಎಂಬುದು ಇಲ್ಲಿನ ವೈವಾಹಿಕ ಸಂಬಂಧದಲ್ಲಿ ಕೆಲವು ಕಡೆ ಅನೈತಿಕವೆನಿಸಿಕೊಂಡರೂ ವಿಮಲ-ಮಿಂಗೇಲಿ, ಕೇಶವಭಟ್ಟ-ವಿನೋದಿನಿಯರ ಮದುವೆಯು ಆ ಸಮಾಜದಲ್ಲಿ ಒಂದು ಬಂಡಾಯದ ಸ್ವರೂಪವೇ ಆಗಿದೆ.

ಹೀಗೆ ಕಾದಂಬರಿಯ ಅಂತ್ಯದ ವೇಳೆಗೆ ಸಮಾಜವಾದ ಎಂಬುದು ತನ್ನ ಅಗತ್ಯಗಳಿಗೆ ತಕ್ಕಂತೆ ಬೇರೆ ಬೇರೆ ರೂಪ ಪಡೆದು ಸಫಲತೆಯನ್ನು ಕಂಡು ಕೊಳ್ಳುತ್ತದೆ.

### ದಿವ್ಯ - ಪ್ರಜಾಪ್ರಭುತ್ವ

ದಿವ್ಯ ಕಾದಂಬರಿಯಲ್ಲಿ ಸಮಾಜ ಬಹುತೇಕ ಅಗೋಚರ ನೆಲೆಯಲ್ಲಿ ಇದ್ದು ಪಾತ್ರಗಳ ಬೆಳವಣಿಗೆಯ ಮೂಲಕ ಅದರ ಇರುವಿಕೆಯು ವ್ಯಕ್ತವಾಗುತ್ತದೆ. ಕಾದಂಬರಿಯ ಮೊದಲ ಭಾಗದಲ್ಲಿ ದಯಿನೆ ಮನೆಯನ್ನು ಅತ್ಯಂತ ಹತ್ತಿರದಿಂದ ಬಲ್ಲ ಕೆಲ ಜನರೂ ಸಾಕಷ್ಟು ದೂರದಲ್ಲಿರುವ ಸಾಹುಕಾರ ಮಂಜಯ್ಯನವರ ಮನೆಯೂ ಇದ್ದು, ಸಾಹುಕಾರ ಮಂಜಯ್ಯನವರು ರಾಜಕೀಯದಲ್ಲಿ ಸಾಕಷ್ಟು ಪಳಗಿದವರಾಗಿರುತ್ತಾರೆ. ಮೇಲ್ಮನೆಯ ಮೆಂಬರ್ ಆದ ಸಾಹುಕಾರರು ತಮ್ಮ ಊರಿಗೆ ಹೆಚ್ಚಿನ ಉಪಕಾರವೇನನ್ನೂ ಮಾಡದೇ ಹೋದರೂ ಟಾರು

ರಸ್ತೆಯೊಂದನ್ನು ಹಾಕಿಸುತ್ತಾರೆ. ಮಂಜಯ್ಯನಿಗೆ ನಾನಾ ಮೂಲದ ಆದಾಯಗಳಿದ್ದರೂ ಪ್ರಮುಖವಾಗಿ ಗೇಣಿಯಿಂದ ಬರುವ ಆದಾಯವನ್ನು ಅವರು ಬಿಡಲೊಲ್ಲರು. ಸ್ವತಂತ್ರ್ಯ ಪೂರ್ವದಲ್ಲಿ ಮಂಜಯ್ಯನವರೇ ಹೇಳುತ್ತಿದ್ದ ಉಳುವವನೇ ನೆಲದೊಡೆಯ ಎಂಬ ಮಾತು ಪ್ರಜಾಪ್ರಭುತ್ವ ಜಾರಿಗೆ ಬಂದ ಮೇಲೆ ಅವರಿಗೇ ತಿರುಗುಬಾಣವಾಯಿತು. ಸರ್ಕಾರದ ಭೂ ಸುಧಾರಣಾ ಕಾನೂನಿಗೆ ಇವರೂ ತಲೆ ಕೊಡುವಂತಾಯಿತು. ಇತ್ತ ಸಮಾಜವಾದಿಯಾಗಿ ಜನಪರವಾಗಿ ನಡೆದುಕೊಳ್ಳಲಾರದೆ ಅತ್ತ ಜಮೀನುದಾರರ ಪರವಾಗಿ ನಿಂತು ತನ್ನ ಜಮೀನನ್ನು ಉಳಿಸಿಕೊಳ್ಳಲೂ ಆಗದೆ ಮಂಜಯ್ಯ ಸಿಕ್ಕಿ ಹಾಕಿಕೊಳ್ಳುತ್ತಾನೆ. ಪ್ರಜಾಪ್ರಭುತ್ವದಲ್ಲಿ ಅವರೂ ಉಳಿದವರಂತೆಯೇ ಸಾಮಾನ್ಯರಾಗುತ್ತಾರೆ. ಸರ್ಕಾರ ಇಲ್ಲಿ ಸಮಾನತೆಯನ್ನು ಸಾಮಾಜಿಕ ನ್ಯಾಯವನ್ನು ನೀಡುವಲ್ಲಿ ಬಂಡಾಯದ ಅಂಶವಾಗಿ ಕಂಡು ಬರುತ್ತದೆ.

ಗಣಪಯ್ಯನನ್ನು ದುರುಗಪ್ಪನ ಕೊಲೆ ಕೇಸಿನಿಂದ ರಕ್ಷಿಸಲು ಅವನ ಪರ ಸುಳ್ಳುಸಾಕ್ಷಿ ಹೇಳುವ ಮಂಜಯ್ಯ ತನ್ನ ವರ್ಚಸ್ಸನ್ನೇ ಕಳೆದುಕೊಳ್ಳಬೇಕಾಗುತ್ತದೆ. ಇಲ್ಲಿ ಪ್ರಜಾಪ್ರಭುತ್ವ ಜನಪರವಾಗಿ ವರ್ತಿಸಿರುವುದನ್ನು ಕಾಣಬಹುದು.

ಗಣಪಯ್ಯನನ್ನು ದುರುಗಪ್ಪನ ಕೊಲೆ ಕೇಸಿನಿಂದ ರಕ್ಷಿಸಲು ಅವನ ಪರ ಸುಳ್ಳು ಸಾಕ್ಷಿ ಹೇಳುವ ಮಂಜಯ್ಯ ತನ್ನ ವರ್ಚಸ್ಸನ್ನೇ ಕಳೆದುಕೊಳ್ಳಬೇಕಾಗುತ್ತದೆ. ಮಂಜಯ್ಯನ ಸಾಕ್ಷಿ ಸುಳ್ಳೆಂದು ತಿಳಿಯುತ್ತದೆ. ಇಲ್ಲಿಯೂ ಸರ್ಕಾರದ ಕೇಸು ಗೆಲ್ಲುತ್ತದೆ. ಅದರ ಮುಂದೆ ಮಂಜಯ್ಯ ಕುಗ್ಗಿ ಹೋಗಬೇಕಾಗುತ್ತದೆ. ಘನಶ್ಯಾಮನು ಸಾಮಾಜಿಕವಾಗಿ ಬೆಳೆಯುತ್ತಾ ಹೋದಂತೆ ಆಳುವ ಪಕ್ಷ ಅವನ ತಂದೆಗೆ ನೀಡಿದ ಸ್ಥಾನವನ್ನೇ ಅವನಿಗೂ ನೀಡಲು ಮುಂದಾಗುತ್ತದೆ. ಆದರೆ ತಾನು ಚುನಾವಣೆಯಲ್ಲಿ ನಿಂತು ನಿಲ್ಲುವೆನೆಂದು ಹೇಳಿ ಜನರ ಮೆಚ್ಚುಗೆಗೆ ಪಾತ್ರನಾಗಿರುತ್ತಾನೆ. ಮುಂಬರುವ ಅವಕಾಶಗಳಿಗಾಗಿ ಅವನು ಕಾದಿದ್ದಾನೆ.

ಘನಶ್ಯಾಮನ ಗೆಳೆಯ ರಾಮಸ್ವಾಮಿಯೂ ತನ್ನ ಸ್ವಾರ್ಥದ ಕಾರಣದಿಂದ ರಾಜ್ಯಸಭೆಯ ಮೆಂಬರ್ ಆಗುವಂತೆ ಸಲಹೆ ನೀಡುತ್ತಾನಾದರೂ, ಘನಶ್ಯಾಮ ಅದಕ್ಕೆ ಒಪ್ಪುವುದಿಲ್ಲ. ಕಾದಂಬರಿಯ ಕೊನೆಗೆ ನಡೆಯುವ ಈ ಘಟನೆಯು ಮುಂದೆ ಘನಶ್ಯಾಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನಬೆಂಬಲದಿಂದಲೆ ಗೆದ್ದು ಬಂದು ರಾಜಕೀಯದಲ್ಲಿ ಮುಂದುವರೆಯುವ ಸೂಚನೆಗಳಿವೆ. ಪ್ರಜಾಪ್ರಭುತ್ವ ಘನಶ್ಯಾಮನ ಆದರ್ಶಗಳಿಗೆ ಒಂದು ದಾರಿಯಾಗುತ್ತದೆ. ಆ ಮೂಲಕ ಬಂಡಾಯದ ಹೊಸದಾರಿಗೆ ಅವನು ಪಲ್ಲಟಗೊಳ್ಳುತ್ತಾನೆ. ವೈಯಕ್ತಿಕವಾದ ಬೆಳವಣಿಗೆಯ ಜೊತೆಯಲ್ಲೇ ತಾನೊಬ್ಬ ವಿಭಿನ್ನವಾದ ನಾಯಕನಾಗಿ ಜನಸೇವೆಯಲ್ಲಿ ತೊಡಗಬೇಕೆಂಬ ಆಸೆಯೂ ಇದೆ.

ಕಾದಂಬರಿಯ ಪ್ರಾರಂಭದಲ್ಲಿ ಕರಿಯ ಮಂಜಯ್ಯನವರು ಬಾವುಟ ಹಾರಿಸಿ ಹೇಳುವ ಗಾಂಧೀವಾದದ ಸಮಾನತೆಯ ಮಾತುಗಳಲ್ಲಿ ಸುಳ್ಳು ಎಂದ ಗೌರಿಯ ಎದುರು ಹೇಳಿಕೊಳ್ಳುತ್ತಾನೆ. ಆದರೂ ಎಲ್ಲರೆದುರು

ಅದನ್ನು ಹೇಳಲು ಅವನಿಗೆ ಬಾಯಿಲ್ಲ.

ಹೀಗೆ ಪ್ರಜಾಪ್ರಭುತ್ವ 'ದಿವ್ಯ'ದಲ್ಲಿ ಸೂಕ್ಷ್ಮವಾಗಿ ತನ್ನ ಪ್ರಭಾವವನ್ನು ಬೀರಿ ಬಂಡಾಯದ ಒಂದು ಅಂಶವಾಗಿ ವ್ಯಕ್ತವಾಗಿದೆ. ವೈಚಾರಿಕವಾಗಿಯೂ ಕ್ರಿಯಾಶೀಲವಾಗಿಯೂ ಇಲ್ಲಿ ಬಂಡಾಯವು ಪ್ರಕಟವಾಗಿದೆ ಎನ್ನಬಹುದು. ನವ್ಯ ಸಾಹಿತ್ಯದ ವ್ಯಕ್ತಿನಿಷ್ಠತೆಯೂ ಬಂಡಾಯದ ಸಮೂಹ ನಿಷ್ಠೆಯೂ ಸೇರಿ ಕಾದಂಬರಿ ಯಶಸ್ವಿಯಾಗುತ್ತದೆ. ಜೊತೆಗೆ ಬಂಡಾಯ ಉಳಿದ ನಾಲ್ಕು ಕಾದಂಬರಿಗಳಿಗಿಂತ ಇಲ್ಲಿ ಪ್ರತಿಫಲವನ್ನು ಪಡೆದಿದೆ ಎನ್ನಬಹುದು.

## ಅಡಿ ಟಿಪ್ಪಣಿ

1 ಗಾಂಧಿವಾದದ ಶವ ಪರೀಕ್ಷೆ, ಪುಟ ೧.

2 ಸಂಸ್ಕಾರ, ಪುಟ ೧೪.

3 ಲೋಹಿಯಾ, ಪುಟ ೪೪.

4 ಮಾರ್ಕ್ಸ್, ಗಾಂಧಿ, ಸಮಾಜವಾದ, ಪುಟ ೨೮೧.

5 ಭಾರತೀಪುರ, ಪುಟ ೧೦೦.

6 ಯುಗಪಲ್ಲಟ, ಪುಟ ೧೯.

7 ಭಾರತೀಪುರ, ಪುಟ ೧೦.

8 ಭಾರತೀಪುರ, ಪುಟ ೧೧.

9 ಭಾರತೀಪುರ, ಪುಟ ೩೮.

10 ಭಾರತೀಪುರ, ಪುಟ ೧೪೬.

11 ಅವಸ್ಥೆ, ಪುಟ ೨೯.

12 ಅವಸ್ಥೆ, ಪುಟ ೧೦೨.

13 ಅವಸ್ಥೆ, ಪುಟ ೧೨೧.

14 ಅವಸ್ಥೆ, ಪುಟ ೧೩೮.

15 ಅವಸ್ಥೆ, ಪುಟ ೧೪೯.

16 ಅವಸ್ಥೆ, ಪುಟ ೨೯..

17 ಅವಸ್ಥೆ, ಪುಟ ೧೦೦.

18 ಅವಸ್ಥೆ, ಪುಟ ೪೨.

19 ಅವಸ್ಥೆ, ಪುಟ ೧೩೧.

20 ಅವಸ್ಥೆ, ಪುಟ ೧೩೦.

21 ಅವಸ್ಥೆ, ಪುಟ ೧೪೯.

22 ಅವಸ್ಥೆ, ಪುಟ ೧೪೯.

23 ದಿವ್ಯ, ಪುಟ ೧೨೩.

## ಅಧ್ಯಾಯ - ೫

## ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳ ಬಂಡಾಯದ ಸಾಮಾಜಿಕ ನಿಲುವುಗಳು ಅವುಗಳ ಸ್ಥೂಲ ವಿಶ್ಲೇಷಣೆ

ಯಾವುದೆ ಸಾಹಿತ್ಯವು ಸಮಾಜದಿಂದ ಹೊರತಾದುದಲ್ಲ. ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳೂ ಹಲವು ಸಾಮಾಜಿಕ ಚಿಂತನೆಗಳನ್ನು ಒಳಗೊಂಡಿದ್ದು ವಿಭಿನ್ನವಾದ ನಿಲುವನ್ನು ತಳೆಯುತ್ತವೆ. ಆ ದೃಷ್ಟಿಯಿಂದ ಒಟ್ಟು ಅಧ್ಯಯನದಿಂದ ವ್ಯಕ್ತವಾಗುವ ಕಾದಂಬರಿಗಳ ಒಳಗಿನ ಬಂಡಾಯದ ಬಗೆಗಿನ ಸಾಮಾಜಿಕ ನಿಲುವುಗಳು ಏನು ಎಂಬುದರ ಒಂದು ಸ್ಥೂಲ ನೋಟವನ್ನು ಈ ವಿಭಾಗದಲ್ಲಿ ಗ್ರಹಿಸಲಾಗಿದೆ.

ಪಾಶ್ಚಾತ್ಯ ಹಾಗು ಭಾರತೀಯ ದೇಸೀನೆಲೆಯ ಹೋರಾಟ ಈ ಎರಡು ನೆಲೆಗಳಲ್ಲಿ ಇವರ ಕಾದಂಬರಿ ರೂಪುಗೊಂಡಿದ್ದು, ಅದರ ಪರಿಣಾಮದಿಂದಾಗಿ ಕಾದಂಬರಿಯು ತಾಳುವ ನಿಲುವುಗಳು ವಿಶೇಷವಾಗಿದೆ. ಇವರ ಕಾದಂಬರಿಗಳಲ್ಲಿ ಪ್ರಕಟವಾಗಿರುವ ಬಂಡಾಯ ಅವರ ಸಮಕಾಲೀನ ಸಾಹಿತಿಗಳಿಗಿಂತ ಪ್ರತ್ಯೇಕತೆಯನ್ನು ಸಾಧಿಸಿಕೊಂಡಿದೆ. ಕನ್ನಡದ ನವ್ಯ ಸಾಹಿತಿಗಳಲ್ಲಿ ಅನೇಕರಲ್ಲಿ ಈ ಅಂಶವನ್ನು ಗಮನಿಸಬಹುದಾದರೂ ವೈಯಕ್ತಿಕ ಹಾಗು ಸಾಮಾಜಿಕ ನೆಲೆಗಳೆರಡರಲ್ಲೂ ಇವರ ಕಾದಂಬರಿಗಳು ಚಿಂತಿಸುತ್ತವೆ.

ಸಮಾನತೆಗೆ ಹೋರಾಡಿದ ಗಾಂಧಿ, ಅಂಬೇಡ್ಕರ್, ಲೋಹಿಯಾ ಮುಂತಾದವರು ಇಂದಿನ ಸಮಾಜಕ್ಕೆ ಎಷ್ಟು ಪ್ರಸ್ತುತರು ಎನ್ನುವುದನ್ನು ಇವರ ಕಾದಂಬರಿಗಳು ಪರೀಕ್ಷಿಸುತ್ತವೆ. ಅವರ ವಿಚಾರಗಳು ಒಂದಕ್ಕೊಂದು ಎದುರಾಗಿ ದೇಶೀ ಮೂಲದ ಚಿಂತನೆಗಳಿಗೆ ಹೆಚ್ಚಿನ ಒತ್ತು ನೀಡಿದ್ದಾರೆ. ಸಮಾನತೆ ಸಾಧಿತವಾಗುವುದು ಆರ್ಥಿಕ ವಿಷಯಗಳಿಂದ ಮಾತ್ರವಲ್ಲ ಅದಕ್ಕೂ ಮೀರಿದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಎಂಬುದನ್ನು ವ್ಯಕ್ತಪಡಿಸುತ್ತಾರೆ. ಇವರ ಕಾದಂಬರಿಯ ಬಹುತೇಕ ಪಾತ್ರಗಳಲ್ಲಿ ಮಧ್ಯಮ ಹಾಗು ಕೆಳವರ್ಗದ ಪಾತ್ರಗಳಾಗಿದ್ದು ಅವುಗಳು ಸಾಂಸ್ಕೃತಿಕವಾಗಿ ಭದ್ರಬುನಾದಿಯನ್ನು ಹೊಂದಿದ್ದು ತಮ್ಮತನವನ್ನು ಉಳಿಸಿಕೊಳ್ಳಲು ಅದನ್ನೇ ಅಸ್ತ್ರವಾಗಿ ಬಳಸಿಕೊಳ್ಳುತ್ತವೆ. 'ಅವಸ್ಥೆ'ಯ ಕೃಷ್ಣಪ್ಪನ ರೈತಪರ ಹೋರಾಟ 'ದಿವ್ಯ'ದ ಘನಶ್ಯಾಮನು ಕೈಗೊಳ್ಳುವ ಗೇಣಿ ಪದ್ಧತಿಯ ನಿರ್ಮೂಲನೆ ಇವು ಫಲಕಾರಿಯಾಗುವುದು ಪ್ರತಿಯೊಬ್ಬನ ಜೀವನಕ್ಕೆ ಅತ್ಯಗತ್ಯವಾದ ಆಹಾರದ ವಿಷಯವಾದುದರಿಂದ. ಇದೇ ವೇಳೆ 'ಭಾರತೀಪುರ'ದ ಜಗನ್ನಾಥ ಕೈಗೊಳ್ಳುವ ಅಸ್ಪೃಶ್ಯರನ್ನು ದೇವಾಲಯದೊಳಕ್ಕೆ ಪ್ರವೇಶ ಮಾಡಿಸುವ ಪ್ರಯತ್ನ ಅವನಂದುಕೊಂಡಂತೆ ಮುಂದುವರಿಯದೇ ಉಳಿಯುತ್ತದೆ. ದೇವಾಲಯದೊಳಕ್ಕೆ ಪ್ರವೇಶಿಸುವುದು ಅಲ್ಲಿ ಯಾರಿಗೂ ಅನಿವಾರ್ಯವಲ್ಲ. ಹಾಗಾಗಿ ಅಲ್ಲಿ ಜಗನ್ನಾಥ ನಿರೀಕ್ಷಿಸಿದ ಬಂಡಾಯವೇನೂ ನೆರವೇರುವುದಿಲ್ಲ.

ಈ ಮೂರೂ ಸನ್ನಿವೇಶವನ್ನು ಗಮನಿಸಿದರೆ ಜನರಿಗೆ ಅನಿವಾರ್ಯವಾಗದ ಹೊರತು ಯಾವ ಸಂಘಟನೆಯೂ ರೂಪುಗೊಳ್ಳುವುದಿಲ್ಲ, ಫಲಕಾರಿಯಾಗುವುದಿಲ್ಲ. ಹಾಗೊಂದು ವೇಳೆ ಕ್ರಾಂತಿಯ ಮುಖವಾಡ ಧರಿಸಿ ಒಬ್ಬನ ವೈಯಕ್ತಿಕ ಉದ್ದೇಶಗಳಿಗಾಗಿ ನಡೆಸುವ ಸಾಮಾಜಿಕ ಹೋರಾಟವು ವಿಫಲವಾಗುತ್ತವೆ ಎಂಬುದನ್ನು

ಈ ಕಾದಂಬರಿಗಳಲ್ಲಿ ಕಾಣಬಹುದು.

ತಾವು ಕಟ್ಟಿಕೊಡುವ ಕಾದಂಬರಿಯಲ್ಲಿ ಬರುವ ಬಂಡಾಯದ ಬಗೆಗಿನ ಅವರ ಕಾಣ್ಕೆಯನ್ನು ವಾದಕ್ಕೆ ಒಡ್ಡಿದ್ದಾರೆ. ಯಾವುದೇ ಒಂದು ಬಗೆಯ ವಾದಕ್ಕೆ ಮಾತ್ರ ಪ್ರೋತ್ಸಾಹ ನೀಡದೆ ಎಲ್ಲ ವಾದವನ್ನೂ ಮುಕ್ತವಾಗಿ ಚರ್ಚಿಸುತ್ತಾರೆ. ಅದರಿಂದ ಬರುವ ತಿಳುವಳಿಕೆಗಳು ಸಮಾಜವು ಅಳವಡಿಸಿಕೊಳ್ಳಬೇಕಾದ ಹೊಸ ಮೌಲ್ಯಗಳಾಗಿ ಕಾಣುತ್ತದೆ. ಸಮಾನತೆ ಬೇಕು. ಅದು ಆರ್ಥಿಕ ವಿಷಯಗಳಲ್ಲಿ ಮಾತ್ರವಲ್ಲದೆ ಇತರ ಸಾಮಾಜಿಕ ಅಂಶಗಳಲ್ಲಿಯೂ ಇರಬೇಕು. ವೈವಿಧ್ಯತೆ ಇರಬೇಕು. ಅವೆಲ್ಲವೂ ಜೊತೆ ಸೇರಿ ರಾಷ್ಟ್ರೀಯತೆಯ ಕಲ್ಪನೆಯನ್ನು ತರಬೇಕು. ರಾಷ್ಟ್ರೀಯತೆಯು ಬಂಡವಾಳಶಾಹಿಗಳ ಪರವಾಗಿ ಇದ್ದರೆ ಜನಪರವಾಗಿರಬೇಕು ಎಂಬ ಅಂಶಗಳನ್ನು ಸಾರುತ್ತದೆ.

'ಯುಗಪಲ್ಲಟ'ದ ಲೇಖನವೊಂದರಲ್ಲಿ "ಪೂರ್ಣಾವಧಿಯ ಅಧ್ಯಾಪಕನಾಗಿ ಕೆಲಸ ಮಾಡುವ ನಾನು ನನ್ನ ಶಕ್ತ್ಯಾನುಸಾರ ತೊಡಗಿಕೊಳ್ಳುವ ರಾಜಕೀಯ ಕ್ರಿಯೆಗಳಲ್ಲಿ ಒಂದು ವಿಷಯದಲ್ಲಿ ಮಾತ್ರ ಯಾವತ್ತೂ ನಿಶ್ಚಲನಾಗಿದ್ದೇನೆ ಎಂದು ನಂಬಿದ್ದೇನೆ. ಮೊದಲಿನಿಂದಲೂ ನಾನು ಪ್ರಜಾಸತ್ತಾತ್ಮಕ ಸಮಾಜವಾದಿಯಾಗಿ ಉಳಿದಿದ್ದೇನೆ. ಸಾಂಸ್ಕೃತಿಕ ಪ್ರಶ್ನೆಗಳು ಬಂದಾಗ ನಾನು ಸಂದಿಗ್ಧಗೊಳ್ಳುವುದೂ ಈ ಕಾರಣದಿಂದಲೇ ಎಂದು ತಿಳಿದಿದ್ದೇನೆ"[1] ಎಂದು ಹೇಳುತ್ತಾರೆ. ಈ ಮಾತುಗಳು ಅವರ ಕಾದಂಬರಿಯಲ್ಲಿ ಮತ್ತಷ್ಟು ಸ್ಪಷ್ಟವಾಗುತ್ತದೆ. ಪಾತ್ರಗಳ ವೈಯಕ್ತಿಕ ವಿಷಯಗಳಲ್ಲಿ ಈ ಸಂದಿಗ್ಧವನ್ನು ಅವರು ಎದುರಿಸಿದ್ದಾರೆ. ಸಂಸ್ಕಾರದ ಪ್ರಾಣೇಶಾಚಾರ್ಯ, ಭವದ ದಿನಕರ, ದಿವ್ಯದ ಕೇಶವ ಶರ್ಮ ಇವರಲ್ಲಿ ಈ ರೀತಿಯ ಸಂದಿಗ್ಧಗಳಿವೆ. ಆದರೆ ಪ್ರಾಣೇಶಾಚಾರ್ಯ, ದಿನಕರ, ಇವರಿಬ್ಬರಿಗಿಂತ ಕೇಶವಶರ್ಮ ಈ ಸಂದಿಗ್ಧವನ್ನು ಮೀರಿ ಹೆಚ್ಚು ಪ್ರಸ್ತುತನಾಗುತ್ತಾನೆ.

ಸಾಮಾಜಿಕ ಹೋರಾಟಗಳು ತುಳಿತಕ್ಕೊಳಗಾದ ಗುಂಪುಗಳ ಕಡೆಯಿಂದ ರೂಪುಗೊಂಡರೆ ವೈಯಕ್ತಿಕ ಬಂಡಾಯದ ಭಾವನೆಗಳು ಆತ್ಮಪ್ರಜ್ಞೆಯಿಂದ ರೂಪುಗೊಂಡು ಬೆಳೆಯಬೇಕೆಂದು ಕಾದಂಬರಿ ಸೂಚಿಸುತ್ತದೆ. 'ಅವಸ್ಥೆ'ಯ ರೈತರ ಹೋರಾಟವನ್ನು ಇಲ್ಲಿ ಗಮನಿಸಬಹುದು.

ಬದಲಾದ ಬಂಡಾದ ರೂಪರೇಷೆಗಳು ಸಾಂಸ್ಕೃತಿಕ ಹಂತದಲ್ಲಿ ಮಾತ್ರವಲ್ಲದೆ ರಾಜಕೀಯ, ಆರ್ಥಿಕ ಮುಂತಾದ ಆಯಾಮಗಳನ್ನು ಪಡೆದಿದೆ. 'ಭಾರತೀಪುರ' ಕಾದಂಬರಿಯಲ್ಲಿ ಇದನ್ನು ಕಾಣಬಹುದು. ಅಲ್ಲಿಯ ಜನ ಸ್ಮೃತಿಕೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸುತ್ತಾರೆ. ಅದೇ ವೇಳೆ ಶಿಕ್ಷಣ, ಉದ್ಯೋಗ, ರಾಜಕೀಯ ರಂಗದಲ್ಲಿಯೂ ಬೆಳೆಯುವ ಹಂಬಲವನ್ನು ವ್ಯಕ್ತಪಡಿಸುತ್ತಾರೆ.

ಇದೇ ಅಂಶವು 'ದಿವ್ಯ'ದಲ್ಲಿ ತದ್ವಿರುದ್ಧವಾಗಿ ಕಂಡು ಬರುತ್ತದೆ. ಅನ್ನಪೂರ್ಣೆಯ ಕ್ಷೇತ್ರದಲ್ಲಿ ಆಗಬೇಕಾದ ತುಂಗಾನದಿಗೆ ಸೇತುವೆ, ವಿದ್ಯುತ್ ದೀಪ ಸೌಲಭ್ಯ ಇವುಗಳನ್ನು ಅರ್ಚಕ ಸುಬ್ರಹ್ಮಣ್ಯ

ಅವಧಾನಿಗಳು ವಿರೋಧಿಸುತ್ತಾರೆ. ಭತ್ತದ ಬದಲಾಗಿ ಕಾಫಿ ಮತ್ತು ಚಹಾ ಬೆಳೆಯಬಾರದೆಂದು ವಾದಿಸುತ್ತಾರೆ. ಇದರ ಹಿಂದೆ ಅವರ ಸ್ವಾರ್ಥವಿರುವುದನ್ನು ಕಾಣಬಹುದು. ಇಂತಹ ಪೊಳ್ಳು ಸ್ವಕೀಯತೆಯನ್ನು ಕಾದಂಬರಿಯಲ್ಲಿ ಪ್ರಶ್ನಿಸುತ್ತಾರೆ. ಗಾಂಧಿ, ಲೋಹಿಯಾ, ಅಂಬೇಡ್ಕರ್ ಮೊದಲಾದವರ ಚಿಂತನೆಗಳಲ್ಲಿ ಹಾಗು ಪ್ರಜಾಪ್ರಭುತ್ವ ನೀತಿಯಲ್ಲಿ ಕಂಡು ಬರುವ ದಬ್ಬಾಳಿಕೆಯ ವಿರೋಧಿ ನೀತಿಯನ್ನು ಮತ್ತೆ ಮತ್ತೆ ಹೇಳುತ್ತಾ ಅದರ ಪ್ರಸ್ತುತತೆಯನ್ನು ಮನದಟ್ಟು ಮಾಡಿಕೊಡುತ್ತಾರೆ.

ವೈಯಕ್ತಿಕ ಮಟ್ಟದ ತಕ್ಷಣದ ಸಿಟ್ಟುಗಳು ಬೆಳೆಯುತ್ತಾ ಹೋದಂತೆ ಅದು ಚಳವಳಿಯ ಸ್ವರೂಪವನ್ನು ಪಡೆಯುತ್ತದೆ ಎಂಬುದನ್ನು 'ಅವಸ್ಥೆ' ಕಾದಂಬರಿ ಸೂಚಿಸುತ್ತದೆ. ಕೃಷ್ಣಪ್ಪ ಮೊದಲಬಾರಿ ಸೆರೆವಾಸವನ್ನು ಅನುಭವಿಸಿದಾಗ ಆದ ಕ್ರೂರ ಅನುಭವಗಳಿಂದಾಗಿ ಅವನೊಳಗೇ ಅಧಿಕಾರ ಅಥವಾ ಪ್ರಭುತ್ವ ವಿರೋಧಿಯಾದ ಸಿಟ್ಟು ಹುಟ್ಟಿ ಅದು ಮುಂದುವರಿದು ಕ್ರಾಂತಿಗೆ ಪ್ರೇರೇಪಿಸುತ್ತದೆ.

ಸಾಮಾಜಿಕ ವ್ಯವಸ್ಥೆಯನ್ನು ಮೇಲಿನ ಹಂತದಿಂದ ಸರಿಪಡಿಸಬೇಕೆಂಬುದನ್ನು ಕಾದಂಬರಿ ಸಾರಿ ಹೇಳುತ್ತದೆ. ಮುಂದೆ ಕೃಷ್ಣಪ್ಪ ತಾನೇ ಅಧಿಕಾರಕ್ಕೆ ಬಂದರೂ ಜನಪರವಾಗಿ ಆಲೋಚಿಸುತ್ತಾನೆ. ತಾನು ಆಳುವವನೆಂಬ ಭಾವನೆ ಅವನಲ್ಲಿ ಕಂಡು ಬರುವುದಿಲ್ಲ. ಕೊನೆಗೆ ಅಧಿಕಾರವನ್ನೂ ತೊರೆದು ಬಿಡುತ್ತಾನೆ. ತುಳಿತಕ್ಕೆ ಒಳಗಾದವರು ಹೋರಾಟ ಮಾಡಿದಾಗ ಮಾತ್ರ ಸಮಾಜದ ಕ್ಷುದ್ರತೆ ಸುಟ್ಟೀತೆಂಬ ನಿಲುವನ್ನು ವ್ಯಕ್ತಪಡಿಸುತ್ತಾನೆ. ಕೃಷ್ಣಪ್ಪನ ಈ ಕೊನೆಯ ನಿಲುವೇ ಕಾದಂಬರಿ ಹೇಳುವ ಸಾಮಾಜಿಕ ನಿಲುವಾಗಿದೆ.

ಬಂಡಾಯವು ಪ್ರಶ್ನಿಸುವ ಹೊರಶಕ್ತಿಯಾಗಿ ಉಳಿಯದೆ ಒಳಗಿನ ಆಶಯವೂ ಆಗಬೇಕು. ಬಂಡಾಯದ ಸಾಮಾಜಿಕ ಅಂಶಗಳು ವೈಯಕ್ತಿಕ ಬದುಕಿನ ಅನಿವಾರ್ಯ ಅಂಶವೂ ಆಗಿರಬೇಕು. ಅಂತಹ ಆಂತರಿಕ ಅಗತ್ಯವನ್ನು ಒಳಗೊಂಡ ಬಂಡಾಯ ಮಾತ್ರ ಫಲಕಾರಿಯಾಗುತ್ತದೆ ಎಂಬುದು ಇವರ ನಿಲುವು.

ಭಾರತೀಪುರ ಕಾದಂಬರಿಯನ್ನು ಗಮನಿಸಿದಾಗ ಜಗನ್ನಾಥನ ವೈಯಕ್ತಿಕ ಬಂಡಾಯ ಸ್ವಲ್ಪಮಟ್ಟಿನ ಸೋಲನ್ನು ಅನುಭವಿಸಿದರೂ ಅವನಿಂದ ಪ್ರೇರಿತವಾದ ಅವನ ಸುತ್ತಲಿನ ಸಮಾಜ ಗೆಲ್ಲುವ ಸೂಚನೆಗಳು ಕಂಡು ಬರುತ್ತವೆ. ಇವರ ಕಾದಂಬರಿಗಳು ಜಡ ವ್ಯವಸ್ಥೆಯನ್ನು ಆರಾಧಿಸುವುದಿಲ್ಲ. ಬದಲಿಗೆ ಪ್ರಶ್ನಿಸುತ್ತದೆ. ಹಾಗೆ ಪ್ರಶ್ನಿಸಿದಾಗ ಮಾತ್ರ ಸಮಾಜ ಚಲನಶೀಲವಾಗಲು ಸಾಧ್ಯವೆಂದು ನಂಬುತ್ತದೆ. ದಿವ್ಯದ ಗೌರಿ 'ಈ ಕರಿಯನನ್ನು ಏಕೆ ಮುಟ್ಟಬಾರದು?' ಎಂದು ಕೇಳುವಂತೆಯೇ, ಸಂಸ್ಕಾರದ ನಾರಣಪ್ಪ ಪ್ರಾಣೇಶಾಚಾರ್ಯರಿಗೆ ಹಾಕುವ 'ಕೊನೆಗೆ ಗೆಲ್ಲೋದು ನಾನೋ ನೀವೋ-ನೋಡುವ' ಎಂಬ ಸವಾಲು ಜಡ ವ್ಯವಸ್ಥೆಯನ್ನು ಪ್ರಶ್ನಿಸುವುದನ್ನು ಮತ್ತು ವಿಮರ್ಶಿಸುವುದನ್ನು ಕಾಣಬಹುದು. ಹೀಗೆ ಇವು ಪ್ರಶ್ನೆಗಳಾಗಿ, ಸವಾಲಾಗಿ ಮಾತ್ರ ಉಳಿಯದೆ ಕೇಶವ ಶರ್ಮನನ್ನೂ, ಪ್ರಾಣೇಶಾಚಾರ್ಯನನ್ನೂ ಸ್ವವಿಮರ್ಶೆ ಮಾಡಿಕೊಳ್ಳುವಂತೆ ಪ್ರೇರೇಪಿಸುತ್ತದೆ. ಎಲ್ಲ ವರ್ಗದ ಜನರೂ ಪರಿವರ್ತನೆಯ ಕ್ರಿಯೆಯಲ್ಲಿ ಪಾಲ್ಗೊಳ್ಳಬೇಕೆಂಬ ನಿಲುವನ್ನು ಇಲ್ಲಿ ಕಾಣಬಹುದು.

ಸಮಾನತೆ ಬೇಕೆಂದು ಬಯಸುವವರು ಅದರ ಹೋರಾಟದಲ್ಲಿ ನೇರವಾಗಿ ಪಾಲ್ಗೊಳ್ಳಬೇಕೆಂದು ಆಶಿಸುತ್ತಾರೆ. ಎಲ್ಲರಿಗೂ ಆಹಾರ ಬೇಕೆಂದರೆ ಎಲ್ಲರೂ ದುಡಿಯಬೇಕೆಂದು ಪ್ರತಿಪಾದಿಸುತ್ತಾರೆ. ಹಾಗಾಗಿಯೇ ಭಾರತೀಪುರ ಕಾದಂಬರಿಯಲ್ಲಿ ದುರ್ಬಲ ವರ್ಗವನ್ನು ಸಂಘಟಿಸುವ ಪ್ರಯತ್ನವಿದೆ.

'ದಿವ್ಯ'ದಲ್ಲಿ ಘನಶ್ಯಾಮನ ಪಾತ್ರ ಕೂಡ ಇದನ್ನೇ ಪ್ರತಿಪಾದಿಸುತ್ತದೆ. ಸಂಘಟನೆ ಮತ್ತು ಪಾಲ್ಗೊಳ್ಳುವಿಕೆಯ ಮೂಲಕ ಉದ್ದೇಶಿತ ಗುರಿಯನ್ನು ತಲುಪಬಹುದೆಂಬ ನಿಲುವನ್ನು ತಾಳುತ್ತಾರೆ. ಘನಶ್ಯಾಮ ತನ್ನೆಲ್ಲಾ ಸ್ವತ್ತನ್ನು ರೈತರಿಗೆ ಹಂಚಿದ ಮೇಲೆಯೂ ಅವರನ್ನೆಲ್ಲ ಸಂಘಟಿಸುವ ಶಕ್ತಿಯಾಗುತ್ತಾನೆ. ಎಲ್ಲರೂ ಎಲ್ಲರ ಏಳಿಗೆಗಾಗಿ ದುಡಿಯುವ ಮೂಲಕ ಹೊಸ ಮೌಲ್ಯವನ್ನು ಹುಟ್ಟುಹಾಕುತ್ತಾರೆ. ಇದು ಬಂಡಾಯದ ಹೊಸ ಸಾಮಾಜಿಕ ನಿಲುವಾಗಿ ಪ್ರಕಟವಾಗಿದೆ. ಕಾದಂಬರಿಯಲ್ಲಿ ಸ್ವಂತಿಕೆಯ ಉಳಿವಿಗಾಗಿ ಗುಂಪುಗಳು ಸಮಾಜದಿಂದ ವಿಮುಖವಾಗಿ ಪ್ರತ್ಯೇಕತೆಯನ್ನು ಬಯಸುವುದಿಲ್ಲ. ಬದಲಿಗೆ ಅದೇ ಸಮಾಜದಲ್ಲಿ ಸ್ಥಾನವನ್ನು ಪಡೆಯಲು ಪ್ರಯತ್ನಿಸುತ್ತದೆ. ಇದನ್ನು ಕಾದಂಬರಿ ಎತ್ತಿ ಹಿಡಿಯುತ್ತದೆ.

ಬಂಡಾಯ ಅಥವಾ ಕ್ರಾಂತಿಯಾಗಲು ಎಲ್ಲ ವರ್ಗ, ಜಾತಿ, ಧರ್ಮಗಳು ಒಗ್ಗೂಡಿ ಪ್ರಯತ್ನಿಸುವುದು ಮುಖ್ಯವೆಂದು ಕಾದಂಬರಿ ಸಾರುತ್ತದೆ. 'ಅವಸ್ಥೆ'ಯಲ್ಲಿ ರೆಹಮಾನ್ ಮತ್ತು ಕೃಷ್ಣಪ್ಪ ಒಟ್ಟಿಗೆ ಇದ್ದು ಒಗ್ಗಟ್ಟಿನ ಸಂಕೇತವಾಗುತ್ತಾರೆ. ಭಾರತ ಸ್ವಾತಂತ್ರ್ಯವಾಗುವ ಸಂದರ್ಭದಲ್ಲಿ ಗಾಂಧೀಜಿಗಿದ್ದ ದೇಶ ಒಡೆದು ಹೋಗುತ್ತದೆಂಬ ಆತಂಕ ಇಲ್ಲಿ ಪ್ರಭಾವ ಬೀರಿರಬಹುದು. ಕೃಷ್ಣಪ್ಪ ತನ್ನ ಪಕ್ಷದವರಿಂದಲೂ, ರೆಹಮಾನ್ ತನ್ನ ಧರ್ಮದವರಿಂದಲೂ ತಿರಸ್ಕಾರಕ್ಕೆ ಗುರಿಯಾಗುತ್ತಾರೆ. ಆದರೂ ಮುಂದೆಯೂ ಒಗ್ಗಟ್ಟಾಗಿ ಉಳಿಯುವುದನ್ನು ಕಾಣಬಹುದು. ಇದನ್ನು ಕಾದಂಬರಿ ಪ್ರತಿಪಾದಿಸುತ್ತದೆ.

ಇವರ ಕಾದಂಬರಿಯ ಪಾತ್ರಗಳು ನೈಜಘಟನೆಗಳ ಅಣಕವಾಗಿ ಕಂಡು ಬರುವುದಿಲ್ಲ. ಆಯಾ ಕಾಲಘಟ್ಟದಲ್ಲಿ ಪರಿವರ್ತನೆಗೆ ಒಳಗಾಗಿ ಬಂಡಾಯದ ತೀವ್ರತೆಯತ್ತ ಹೆಜ್ಜೆ ಹಾಕಿರುವುದನ್ನು ಕಾಣಬಹುದು.

ಸಂಸ್ಕಾರ, ಭಾರತೀಪುರ, ಅವಸ್ಥೆ ಹಾಗೂ ದಿವ್ಯ ಈ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಸಮಾಜವನ್ನು ಗಮನಿಸಿದರೆ ಬಂಡಾಯವು ನಿಂತ ನೀರಂತಾಗಿರದೆ ಚಲನಶೀಲವಾಗಿರಬೇಕೆಂಬ ನಿಲುವನ್ನು ತಾಳಿರುವುದು ತಿಳಿದು ಬರುತ್ತದೆ.

ಸಾಮಾಜಿಕ ಸಮಾನತೆಯನ್ನು ತರಲು ಪ್ರಯತ್ನಿಸುವ ಬಂಡಾಯದಲ್ಲಿ ಎರಡು ಮುಖಗಳನ್ನು ಗುರುತಿಸಬಹುದು. ಆಳುವವರಾಗಿದ್ದುಕೊಂಡು ಜನಪರವಾಗಿ ಚಿಂತಿಸುವುದು ಒಂದು ಬಗೆಯ ಬಂಡಾಯವಾದರೆ, ಆಳುವ ವರ್ಗದ ದಬ್ಬಾಳಿಕೆಯ ವಿರುದ್ಧ ಜನಪರವಾಗಿ ನಿಂತು ಮಾಡುವ ಹೋರಾಟ ಮತ್ತೊಂದು ಬಗೆಯ ಬಂಡಾಯವಾಗಿದೆ. ಈ ಎರಡು ರೀತಿಯಾದ ವರ್ಗ ಹೋರಾಟವನ್ನು ಕಾದಂಬರಿ

ಪ್ರತಿಪಾದಿಸುತ್ತದೆ. ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ 'ಅವಸ್ಥೆ'ಯ ಕೃಷ್ಣಪ್ಪನ ಪಾತ್ರ. ಕೃಷ್ಣಪ್ಪ ಅಧಿಕಾರ ಹಿಡಿದಾಗ ಜನಪರವಾದ ಕಾನೂನುಗಳನ್ನು ತರುತ್ತಾನೆ. ಅದಕ್ಕೂ ಮುಂಚೆ ರೈತಪರವಾಗಿ ಸರ್ಕಾರದ ವಿರುದ್ಧ ಹೋರಾಟ ನಡೆಸುತ್ತಾನೆ. ಬಂಡಾಯಕ್ಕೆ ಹೊಸ ಹೊಸ ಸಾಧ್ಯತೆಗಳಿರುವುದನ್ನು ಕಾದಂಬರಿ ಪ್ರತಿಪಾದಿಸುತ್ತದೆ.

ಆರ್ಥಿಕವಾಗಿ ದುರ್ಬಲರಾದ ಜನರೂ, ಅಸ್ಪೃಶ್ಯರೂ ತಮ್ಮ ಸಮಸ್ಯೆಗಳನ್ನು ಆಧುನಿಕ ಸವಲತ್ತುಗಳ ಎದುರಿಗೂ, ಮಾನವೀಯ ಮೌಲ್ಯಗಳ ಎದುರಿಗೂ ಸವಾಲೆಂಬಂತೆ ಮುಂದಿಟ್ಟಿದ್ದಾರೆ. ಇದಕ್ಕೆ ಉತ್ತರವನ್ನು ಹುಡುಕಬೇಕೆಂಬುದು ಕಾದಂಬರಿಯ ಮತ್ತೊಂದು ಸಾಮಾಜಿಕ ನಿಲುವಾಗಿದೆ.

ಭಾರತದ ಸ್ವತಂತ್ರ್ಯಾನಂತರವೂ ಇನ್ನೂ ಉಳಿದಿರುವ ಬೌದ್ಧಿಕ ದಾಸ್ಯದ ವಿರುದ್ಧ ಕ್ರಿಯಾಶೀಲರಾಗಬೇಕೆಂಬುದು ಕಾದಂಬರಿಯ ನಿಲುವಾಗಿದೆ. 'ದಿವ್ಯ'ದ ಗೌರಿಯ ಪಾತ್ರ ಇದನ್ನು ಪ್ರತಿಪಾದಿಸುತ್ತದೆ. ಬೌದ್ಧಿಕವಾಗಿಯೂ, ಕ್ರಿಯಾಶೀಲವಾಗಿಯೂ ಸ್ವಕೀಯತೆಯಿಂದ ಗುರುತಿಸಿಕೊಳ್ಳುತ್ತಾಳೆ. ಇಂತಹ ಮೌಲಿಕ ಬದಲಾವಣೆಯನ್ನು ಬಂಡಾಯದ ಮತ್ತೊಂದು ಮುಖವಾಗಿ ಸಮಾಜದಲ್ಲಿಯೂ ಕಾಣಬೇಕೆಂಬ ಆಶಯವಿರುವಂತೆ ಕಂಡು ಬರುತ್ತದೆ.

ಭವಿಷ್ಯದಲ್ಲಿ ಸಾಧ್ಯವಾಗಬಹುದಾದ ಎಲ್ಲ ರೀತಿಯ ಏಳಿಗೆಗಳಿಗೆ ಇಂದಿನ ಪ್ರತಿಯೊಬ್ಬರೂ ದುಡಿಯಬೇಕೆಂಬುದು ಇಲ್ಲಿನ ನಿಲುವು. ಈ ಪ್ರಯತ್ನದಲ್ಲಿ ಒಬ್ಬರ ದೃಷ್ಟಿಯಲ್ಲಿ ಸರಿಯಾದದ್ದು ಮತ್ತೊಬ್ಬರ ದೃಷ್ಟಿಯಲ್ಲಿ ಸರಿಯಿಲ್ಲದಿರಬಹುದು. ಆದರೆ ಸಮೂಹ ದೃಷ್ಟಿಯಿಂದ ಮುನ್ನಡೆಯುವುದು ಮುಖ್ಯ ಎಂಬುದು ಕಾದಂಬರಿಯ ಸಾಮಾಜಿಕ ನಿಲುವು.

ಹಾಗೆಯೇ ಪ್ರಚಲಿತ ಬಂಡಾಯದ ವಿದ್ಯಮಾನಗಳ ಮೂಲಕ ಚರಿತ್ರೆಯಲ್ಲಿ ಮರೆಯಾದ ಅಂಶಗಳನ್ನು ಹುಡುಕಿ ವರ್ತಮಾನಕ್ಕೆ ಅರ್ಥಪೂರ್ಣ ಸಂಪರ್ಕವನ್ನು ಕಲ್ಪಿಸಬೇಕೆಂಬ ಆಶಯವನ್ನು ಇಲ್ಲಿ ಕಾಣಬಹುದು.

ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳು ಈ ಹಿಂದಿನ ಬಂಡಾಯದ ಅಂಶಗಳಿಗೆ ಉತ್ತರ ಕೊಡುವ ತುರ್ತಿಗೆ ಒಳಗಾಗಿಲ್ಲ. ಹಾಗು ಈ ಹಿಂದಿನ ಬಂಡಾಯದ ಪರಿಕಲ್ಪನೆಗಿಂತ ಭಿನ್ನವಾದ ನೆಲೆಯನ್ನು ಇಲ್ಲಿ ಕಾಣಬಹುದಾಗಿದೆ. ಬಂಡಾಯ ಸಾಮಾಜಿಕ ಪರಿವರ್ತನೆಯ ಒಳದಾರಿಯೂ ಹೌದು ದೊಡ್ಡ ಮಾರ್ಗವೂ ಹೌದು. ಗತ ಕಾಲವನ್ನು ವರ್ತಮಾನದ ಅಗತ್ಯಗಳಿಗಾಗಿ ಶೋಧಿಸುವುದು ಅಗತ್ಯವೆಂಬುದು ಕಾದಂಬರಿಯಿಂದ ತಿಳಿದು ಬರುವ ಸಾಮಾಜಿಕ ನಿಲುವಾಗಿದೆ.

ಒಟ್ಟಾರೆಯಾಗಿ ಬಂಡಾಯವೆಂಬುದು ಎಲ್ಲರೂ ಬಯಸುವ ಹುಡುಕುತ್ತಿರುವ ಒಂದು ಮೌಲ್ಯವಾಗಿ ರೂಪುಗೊಂಡಿದೆ. ಈ ನಿಟ್ಟಿನಲ್ಲಿ ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಮಾನವ ಸಂಬಂಧಗಳ ಜಾಲಕ್ಕೆ

ಸಿಕ್ಕಿಕೊಂಡು ಬಂಡಾಯ ತನ್ನ ಅಸ್ತಿತ್ವವನ್ನು ಗುರುತಿಸಿಕೊಂಡಿದೆ ಎನ್ನಬಹುದು. ನಿರ್ದಿಷ್ಟವಾದ ಗುರಿಯೊಂದಿಗೆ ಮಾನವ ಸಂಬಂಧಗಳಲ್ಲಿ ಸ್ವಾತಂತ್ರ್ಯವನ್ನು ತರುವ ಪ್ರಯತ್ನವನ್ನು ಇಲ್ಲಿನ ಬಂಡಾಯ ಕೈಗೊಳ್ಳುತ್ತದೆ.

ಒಟ್ಟಿನಲ್ಲಿ ಯು. ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿನ ಬಂಡಾಯವು, ಬಂಡಾಯದ ಪರಂಪರೆಯ ನಿರಂತರ ಹಾದಿಯಲ್ಲಿ ಒಂದು ಸ್ಪಷ್ಟ ಹೆಜ್ಜೆಯನ್ನು ಮೂಡಿಸಿದೆ ಎನ್ನಬಹುದು.

ತೆರೆದ ಮುಕ್ತಾಯ

ಅಡಿ ಟಿಪ್ಪಣಿ

೧ ಯುಗಪಲ್ಲಟ, ಪುಟ ೨೦, ಲೇ. ಯು.ಆರ್.ಅನಂತಮೂರ್ತಿ.

## ಪರಾಮರ್ಶಿತ ಗ್ರಂಥಗಳು


| ಕ್ರ.ಸಂ. | ಗ್ರಂಥದ ಹೆಸರು | ಲೇಖಕ | ಪ್ರಕಾಶನ | ವರ್ಷ |
|---|---|---|---|---|
| ೧ | ಸಂಸ್ಕಾರ | ಯು.ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೫ |
| ೨ | ಭಾರತೀಪುರ | ಯು. ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೫ |
| ೩ | ಅವಸ್ಥೆ | ಯು. ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೪ |
| ೪ | ಭವ | ಯು.ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೦ |
| ೫ | ದಿವ್ಯ | ಯು. ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೩ |
| ೬ | ಅನಂತಮೂರ್ತಿಯವರ ಆಯ್ದ ಲೇಖನಗಳು | ಯು. ಆರ್. ಅನಂತಮೂರ್ತಿ | ಅಕ್ಷರ ಪ್ರಕಾಶನ, ಹೆಗ್ಗೋಡು. | ೧೯೯೫ |
| ೭ | ಕನ್ನಡ ಕರ್ನಾಟಕ | ಯು. ಆರ್. ಅನಂತಮೂರ್ತಿ | ಕ.ಸಾ.ಪ., ಬೆಂಗಳೂರು. | ೨೦೦೨ |
| ೮ | ವಾಲ್ಮೀಕಿಯ ನೆವದಲ್ಲಿ | ಯು. ಆರ್. ಅನಂತಮೂರ್ತಿ | ಅಭಿನವ, ಬೆಂಗಳೂರು | ೨೦೦೬ |
| ೯ | ಋಜುವಾತು | ಯು. ಆರ್. ಅನಂತಮೂರ್ತಿ | ಅಂಕಿತ ಪುಸ್ತಕ, ಬೆಂಗಳೂರು. | ೨೦೦೭ |
| ೧೦ | ಯುಗಪಲ್ಲಟ | ಯು. ಆರ್. ಅನಂತಮೂರ್ತಿ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. | ೨೦೦೪ |
| ೧೧ | ಕನ್ನಡ ಸಾಹಿತ್ಯ ಚರಿತ್ರೆ | ರಂ. ಶ್ರೀ ಮುಗಳಿ | ಉಷಾಸಾಹಿತ್ಯ ಮಾಲೆ, ಮೈಸೂರು. | ೧೯೭೮ |
| ೧೨ | ಯುಗಧರ್ಮ ಹಾಗು ಸಾಹಿತ್ಯ ದರ್ಶನ | ಕೀರ್ತಿನಾಥ ಕುರ್ತಕೋಟಿ | ಮನೋಹರ ಗ್ರಂಥಮಾಲೆ, ಧಾರವಾಡ. | ೨೦೦೨ |
| ೧೩ | ಹೊಸಗನ್ನಡ ಸಾಹಿತ್ಯ ಚರಿತ್ರೆ | ಪ್ರೊ.ಎಲ್.ಎಸ್.ಶೇಷಗಿರಿರಾವ್ | ಅಂಕಿತ ಪುಸ್ತಕ, ಬೆಂಗಳೂರು. | ೧೯೯೯ |
| ೧೪ | ಕನ್ನಡ ಸಾಹಿತ್ಯ ಚರಿತ್ರೆ | ಹೆಚ್. ನಂಜೇಗೌಡ | ಚೇತನ ಪುಸ್ತಕಾಲಯ, ಮೈಸೂರು. | ೧೯೯೫ |
| ೧೫ | ಸ್ವಾತಂತ್ರ್ಯದ ವಿಕಾಸದತ್ತ | ಜಿ. ರಾಮಕೃಷ್ಣ | ಡಾ. ಸಿದ್ಧನಗೌಡ ಪಾಟೀಲ್, ಬೆಂಗಳೂರು. | ೨೦೦೬ |
| ೧೬ | ಬರಗೂರು ರಾಮಚಂದ್ರಪ್ಪ | ಸಂ. ಸುರೇಶ ಕುಲಕರ್ಣಿ, | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. | ೨೦೦೪ |
| ೧೭ | ಗಾಂಧೀವಾದದ ಶವಪರೀಕ್ಷೆ | ಯಶಪಾಲ್, ಅನು:ಡಿ.ವಿ.ಕೆ. ಮೂರ್ತಿ, ಡಾ. ಪ್ರಧಾನ್ ಗುರುದತ್ತ | ಮೈಸೂರು. | ೧೯೯೮ |
| ೧೮ | ಸಾಹಿತ್ಯ ಮತ್ತು ರಾಜಕಾರಣ | ಬರಗೂರು ರಾಮಚಂದ್ರಪ್ಪ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. | ೧೯೯೮ |
| ೧೯ | ಲೋಹಿಯಾ | ಓಂಕಾರ್ ಶರದ್, ಅನು: ಹಸನ್ ನಯೀಂ ಸುರಕೋಡ, | ಲೋಹಿಯಾ ಪ್ರಕಾಶನ, ಬಳ್ಳಾರಿ. | ೨೦೦೦ |
| ೨೦ | ಸಮಾಜವಾದ ಪರಿಚಯ | ಕೆ. ಎಸ್. ಗೋಪಾಲ ಕೃಷ್ಣಯ್ಯ | ಪ್ರಸಾರಾಂಗ, ಬೆಂಗಳೂರು ವಿ.ವಿ. | ೨೦೦೪ |
| ೨೧ | ಶಂಬಾ ಜೋಷಿಯವರ ಆಯ್ದ ಲೇಖನಗಳು | ಸಂ. ಮಲ್ಲೇಪುರಂ ಜಿ. ವೆಂಕಟೇಶ | ಪುಸ್ತಕ ಪ್ರಾಧಿಕಾರ, ಬೆಂಗಳೂರು. | ೧೯೯೭ |

| ಕ್ರ.ಸಂ. | ಗ್ರಂಥದ ಹೆಸರು | ಲೇಖಕ | ಪ್ರಕಾಶನ | ವರ್ಷ |
|---|---|---|---|---|
| ೨೨ | ಮಾರ್ಕ್ಸ್, ಗಾಂಧಿ ಸಮಾಜವಾದ | ಸಂ. ನಟರಾಜ್ ಹುಳಿಯಾರ್ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. | ೨೦೦೩ |
| ೨೩ | ಯು.ಆರ್.ಅನಂತ ಮೂರ್ತಿ ಒಂದು ವ್ಯಕ್ತಿ ಚಿತ್ರ | | ಬಾಪ್ಕೊ ಪ್ರಕಾಶನ. | |
| ೨೪ | ಪರಂಪರೆ ಹಾಗು ದಲಿತ ಬಂಡಾಯ ಸಾಹಿತ್ಯ- ಸಮಗ್ರ ಅಧ್ಯಯನ | ಮ.ನ.ಜವರಯ್ಯ | ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು. | ೧೯೯೪ |
| ೨೫ | ಕನ್ನಡ ನವ್ಯ ಕಾದಂಬರಿಗಳು | ಡಾ. ಕೆ. ವಿಜಯಶ್ರೀ | ಶ್ರೀ ರಾಮಕೃಷ್ಣ ಪ್ರಕಾಶನ, ಬೆಂಗಳೂರು. | ೨೦೦೨ |
| ೨೬ | ಶಕ್ತಿ ಶಾರದೆಯ ಮೇಳ | ಡಿ. ಆರ್. ನಾಗರಾಜ್ | ಅಕ್ಷರ ಪ್ರಕಾಶನ, ಹೆಗ್ಗೋಡು. | ೨೦೦೨ |
| ೨೭ | ಅನಂತ ಸಾಹಿತ್ಯ | ಸಂ. ಗೌರಿ ಸುಂದರ್ | ಸುಂದರ ಪ್ರಕಾಶನ, ಬೆಂಗಳೂರು. | ೨೦೦೪ |
| ೨೮ | ಪರಂಪರೆಯೊಂದಿಗೆ ಪಿಸುಮಾತು | ಬರಗೂರು ರಾಮಚಂದ್ರಪ್ಪ | ಅಂಕಿತ ಪುಸ್ತಕ, ಬೆಂಗಳೂರು. | ೨೦೦೪ |
| ೨೯ | ಕನ್ನಡ ವಿಮರ್ಶೆಯ ಮಾರ್ಗ | ಸಂ. ಅರವಿಂದ ಮಾಲಗತ್ತಿ | ಕು.ಕ. ಅ.ಸಂ.,ಮಾನಸ ಗಂಗೋತ್ರಿ, ಮೈಸೂರು. | ೨೦೦೪ |
| ೩೦ | ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ | ಅರವಿಂದ ಮಾಲಗತ್ತಿ | ಕ.ಸಾ.ಪ., ಬೆಂಗಳೂರು. | ೨೦೦೩ |
| ೩೧ | ಕೃತಿ ಸಂಸ್ಕೃತಿ | ಎಂ.ಜಿ.ಕೃಷ್ಣಮೂರ್ತಿ | ಋಜುವಾತು ಪ್ರಕಾಶನ, ಮೈಸೂರು. | ೧೯೯೪ |
| ೩೨ | ಶತಮಾನದ ಸಾಹಿತ್ಯ ವಿಮರ್ಶೆ | ಸಂ. ಎಚ್. ಎಸ್. ರಾಘವೇಂದ್ರ ರಾವ್ | ಕ.ಸಾ. ಅಕಾಡೆಮಿ, ಬೆಂಗಳೂರು. | |
| ೩೩ | ಪಾಶ್ಚಾತ್ಯ ಸಾಹಿತ್ಯ ವಾದಗಳು ಮತ್ತು ಕನ್ನಡ ಸಾಹಿತ್ಯ ಸಂದರ್ಭ | ಯಾರ್ವಿನೇಟ್ ಲಿಮ್ಯಾತ್ | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ. | |
| ೩೪ | ವಚನ ಸಾಹಿತ್ಯದಲ್ಲಿ ಸ್ತ್ರೀಯರ ಕ್ರಾಂತಿ | ಹೆಚ್.ಜಿ.ಶೋಭಾ | ಕ.ಸಾ.ಪ., ಬೆಂಗಳೂರು. | ೨೦೦೪ |
| ೩೫ | ದೀಪ ಸಾಲಿನ ನಡುವೆ | ಕೆ.ಎಸ್. ನರಸಿಂಹ ಸ್ವಾಮಿ | ಅಂಕಿತ ಪುಸ್ತಕ, ಬೆಂಗಳೂರು. | ೨೦೦೩ |
| ೩೬ | ಸಂಕ್ರಾಂತಿ | ಪಿ. ಲಂಕೇಶ್ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. | ೧೯೮೫ |
| ೩೭ | ಹದಿಬದೆಯ ಧರ್ಮ | ಡಾ. ಸದಾನಂದ ನಾಯಕ್, ಶ್ರೀಮತಿ ಸರೋಜಿನಿದೇವಿ ನಾಯಕ್ | ಉಷಾ ಸಾಹಿತ್ಯ ಮಾಲೆ, ಮೈಸೂರು. | ೧೯೬೮ |

| ಕ್ರ.ಸಂ. | ಗ್ರಂಥದ ಹೆಸರು | ಲೇಖಕ | ಪ್ರಕಾಶನ | ವರ್ಷ |
|---|---|---|---|---|
| ೩೭ | ಸರ್ವಜ್ಞನ ವಚನಗಳು | ಸಂ. ಎಲ್.ಬಸವರಾಜು | ಗೀತಾ ಬುಕ್ ಹೌಸ್, ಮೈಸೂರು. | ೨೦೦೨ |
| ೩೮ | ತೂಫಾನ್ ಮೇಲ್ | ಜಯಂತ ಕಾಯ್ಕಿಣಿ | ಅಂಕಿತ ಪುಸ್ತಕ, ಬೆಂಗಳೂರು. | ೨೦೦೫ |
| ೪೦ | ಜೀವನ ಪ್ರೇಮ | ಸಂ. ಕಾಳೇಗೌಡ ನಾಗವಾರ | ಕು.ಕ.ಅ.ಸಂ., ಮಾನಸ ಗಂಗೋತ್ರಿ, ಮೈಸೂರು. | ೨೦೦೫ |
| ೪೧ | ಕನ್ನಡ ಪ್ರತಿಭಟನೆ ಕಾವ್ಯ | ಸಂ. ಸಿ. ವೀರಣ್ಣ | ಕ.ಸಾ.ಪ., ಬೆಂಗಳೂರು. | ೧೯೮೧ |
| ೪೨ | ವಡ್ಡಾರಾಧನೆ | ಸಂ. ಡಿ.ಎಲ್. ನರಸಿಂಹಯ್ಯ | ಡಿ.ವಿ.ಕೆ. ಮೂರ್ತಿ, ಮೈಸೂರು. | ೧೯೯೬ |
| ೪೩ | ಶರಣರ ಅನುಭಾವ ಸಾಹಿತ್ಯ | ಡಾ.ಎಚ್.ತಿಪ್ಪೇರುದ್ರ ಸ್ವಾಮಿ | ಡಿ.ವಿ.ಕೆ. ಮೂರ್ತಿ, ಮೈಸೂರು. | ೧೯೬೪ |
| ೪೪ | ಪ್ರಸಾದ | ಸಂ.ಎಚ್.ತಿಪ್ಪೇರುದ್ರ ಸ್ವಾಮಿ | ಜ.ಶ್ರೀ. ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು. | ೧೯೬೪ |
| ೪೫ | ಪಂಪ ಭಾರತಂ ಎಂಬ ವಿಕ್ರಮಾ ರ್ಜುನ ವಿಜಯಂ | ಕುವೆಂಪು | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. | ೧೯೯೦ |
| ೪೬ | ಜನಪದ ಖಂಡಕಾವ್ಯ | ಜಿ.ಶಂ.ಪರಮ ಶಿವಯ್ಯ | ಚೇತನ ಬುಕ್ ಹೌಸ್, ಮೈಸೂರು. | ೧೯೯೬ |
| ೪೭ | ಪಿರಿಯಾಪಟ್ಟಣದ ಕಾಳಗ | ಸಂ.ಪಿ.ಕೆ.ರಾಜಶೇಖರ | ಸಂವಹನ, ಮೈಸೂರು. | ೨೦೦೧ |
| ೪೮ | ಜಾನಪದ ಕಥಾವಳಿ | ಹೆಚ್.ಜೆ. ಲಕ್ಕಪ್ಪ ಗೌಡ | ಲಕ್ಷ್ಮೀ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು. | ೧೯೯೫ |
| ೪೯ | ಪುರಾಣ ಜಾನಪದ ಮತ್ತು ದೇಶೀವಾದ | ಡಾ. ಅರವಿಂದ ಮಾಲಗತ್ತಿ | ಕ.ಸಾ.ಪ., ಬೆಂಗಳೂರು. | ೧೯೯೯ |
| ೫೦ | ಏಕ-ಅನೇಕ | ಶಶಿಕಲಾ ಎಚ್. | | |

